# ಮಾಟಗಾತಿ!

ಮತ್ತು

ಇತರ ಕಥೆಗಳು

ಆನಂದ



ಯಾರಿಂದ ನಾ ಬೆಳಕು ಕಂಡೆನೋ

ಬೆಳೆಯುತ್ತಿಹೆನೋ

ಬಾಳುತ್ತಿಹೆನೋ

ಆ ನನ್ನ

**ತಾಯಿತಂದೆಗಳಡಿದಾವರೆಗಳಲಿ**

ಅರ್ಪಿತವೀ

ಚಿಕ್ಕ ಪುಸ್ತಕವು.

# ಮುನ್ನುಡಿ

ಈಗ ಎರಡು ವರುಷಗಳ ಹಿಂದೆ ನನ್ನ ಹೊಸ ಪರಿಚಯದ ಮಿತ್ರರೊಬ್ಬರು ನನ್ನ ಸಣ್ಣ ಕಥೆಗಳ ವಿಷಯವಾಗಿ ಮಾತನಾಡುತ್ತ, ಈ ಕಥೆ ಚೆನ್ನಾಗಿದೆ, ಆ ಕಥೆ ಚೆನ್ನಾಗಿದೆ, ಇನ್ನೊಂದು ಅಷ್ಟು ಚೆನ್ನಾಗಿಲ್ಲ ಎಂದು ಹೇಳುತ್ತ, "ನೋಡಿ, ನಿಮ್ಮ ಈ ಕಥೆಗಳಿಗಿಂತಲೂ ಚೆನ್ನಾಗಿರುವ ಒಂದು ಕಥೆ 'ನಾನು ಕೊಂದ ಹುಡುಗಿ.' ನೀವು ಅದನ್ನು ನೋಡಿದ್ದೀರಾ" ಎಂದು ಕೇಳಿದರು. ನಾನು ಕಥೆಯನ್ನು ನೋಡಿದ್ದೇನೆಂದೂ ಲೇಖಕರನ್ನು ಬಲ್ಲೆನೆಂದೂ ಅವರಿಗೆ ತಿಳಿಸಿದೆನು. ಅವರು 'ನಾನು ಕೊಂದ ಹುಡುಗಿ' ಕಥೆಯನ್ನು ಬಾಯಿ ತುಂಬ ಕೊಂಡಾಡಿದರು; ಕೊನೆಗೆ, ನಿಮ್ಮ ಕಥೆಗಿಂತ ಚೆನ್ನಾಗಿದೆ ಎಂದು ಹೇಳಿದ್ದರಿಂದ ನೀವು ನೊಂದುಕೊಳ್ಳಬಾರದು, ಎಂದರು. ನಾನು ಆ ಮಾತಿನಿಂದ ನೊಂದುಕೊಂಡಿರಲಿಲ್ಲ; ನೊಂದುಕೊಳ್ಳುವುದಕ್ಕೆ ಪ್ರತಿಯಾಗಿ ಸಂತೋಷಪಟ್ಟಿದ್ದೆನು. ಅದನ್ನು ಆ ಮಿತ್ರರಿಗೆ ತಿಳಿಸಿ, ನಾನು ನೊಂದುಕೊಂಡೇನೆಂದು ಚಿಂತಿಸದಂತೆ ಧೈರ್ಯ ಹೇಳಿದೆನು.

ನನ್ನ ಮಿತ್ರರು ಅಷ್ಟು ಶ್ಲಾಘಿಸಿದ ಆ ಕಥೆಯನ್ನು ಈವರೆಗೆ ಅನೇಕರು ಓದಿದಾರೆ, ಮೆಚ್ಚಿದಾರೆ. ಅದೂ ಅದರ ಜೊತೆಗೆ ಅದೇ ಗ್ರಂಥಕರ್ತರು ಬರೆದ ಇನ್ನು ನಾಲ್ಕು ಕಥೆಗಳೂ ಈ ಪುಸ್ತಕದಲ್ಲಿದೆ. ಈ ಕಥೆಗಳನ್ನು ರಚಿಸಿರುವ ಆನಂದರ ಹೆಸರು ಕನ್ನಡ ನಾಡಿನಲ್ಲಿ ಕಥಾಪ್ರೇಮಿಗಳಿಗೆಲ್ಲ ತಿಳಿದಿರುವ ಹೆಸರು. ಈ ಹೆಸರಿನಿಂದ ಕಥೆ ಬರೆಯುತ್ತಿರುವ ಅಜ್ಜಂಪುರದ ಸೀತಾರಾಮರು ಅವರನ್ನು ಬಲ್ಲ ಜನಕ್ಕೆಲ್ಲ ಅವರ ಕಥೆಗಳಂತೆಯೇ ಪ್ರಿಯರಾಗಿದ್ದಾರೆ. ಈ ಮೊದಲೇ ಇವರ ಕಥೆಗಳ ಪುಸ್ತಕವೊಂದು ಪ್ರಕಟವಾಗಿದೆ. ಇದು ಎರಡನೆಯದು. ಸೀತಾರಾಮರು ಅವರ ಮೊದಲನೆಯ ಪುಸ್ತಕದ ಮುನ್ನುಡಿಯಲ್ಲಿ ನನ್ನ ವಿಷಯದಲ್ಲಿ ಬಹಳ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಅವರ ವಿಷಯದಲ್ಲಿ ನನಗೂ ಬಹು ವಿಶ್ವಾಸವಿದೆ. ಈಗ ಅವರು ಈ ಪುಸ್ತಕಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದ್ದಾರೆ. ಇದನ್ನು ನಾನು ಬಹು ಸಂತೋಷದಿಂದ ಬರೆಯುತ್ತಿದ್ದೇನೆ.

ಕಥೆಯೆನ್ನುವುದು ಮೂಲದಲ್ಲಿ ಹೇಳುವ ಮಾತು. (ನಿಜವಾಗಿ ನೋಡಿದರೆ ಕಾವ್ಯವನ್ನೂ ನಾವು ಹೀಗೆಯೇ ವರ್ಣಿಸಬಹುದು. ಬರೆದು ಓದುವುದೆನ್ನುವುದು ಸಾಹಿತ್ಯಕ್ಕೆ ಈಚೆಗೆ ಬಂದ ಒಂದು ಸ್ಥಿತಿ. ಸ್ವರೂಪತಃ ಸಾಹಿತ್ಯವು ಹಾಡುವ ವಿಷಯ, ಹೇಳುವ ವಿಷಯ; ಬಲ್ಲವರು ಹಾಡಿದರೆ ಹೇಳಿದರೆ ಇತರರು ಕೇಳುವ ವಿಷಯ.) ಕಥೆಯೆನ್ನುವುದು ಕಥಿತವಸ್ತು; ಅದರ ಮುಖ್ಯಲಕ್ಷಣ ಕಥನ; ಅದರ ಹಿರಿಯಗುಣ ಕಥನದಲ್ಲಿ ಕೌಶಲ. ಈ ಕೌಶಲವು ಎರಡು ರೀತಿಯದಾಗಿರುತ್ತದೆ. ಒಂದು ರೀತಿ ನಿಸರ್ಗವಾದ ಕಥನದಲ್ಲಿ ಕಾಣುವುದು. ನಾಲ್ಕು ಜನ ಎಲ್ಲಿಯೋ ಒಂದು ಕಡೆ ಎಂದರೆ ಬಾವಿಯ ಬಳಿ, ಹೊಲದಲ್ಲಿ, ಚಾವಡಿಯಲ್ಲಿ, ಕಟ್ಟೆಯ ಮೇಲೆ ಸೇರಿದಾಗ ಒಬ್ಬರು ಯಾವುದೋ ಸಂಗತಿ ನಡೆಯಿತೆಂದು ಹೇಳತೊಡಗಿದರೆ ಅಲ್ಲಿ ಕಥನ ಸಹಜವಾಗಿ ಆರಂಭವಾಗುತ್ತದೆ. ಯಾರಿಗೋ ಮುನೀಶ್ವರ ಕಂಡ; ಯಾರದೋ ದನ ತಪ್ಪಿಸಿಕೊಂಡು ಹೋಗಿತ್ತು, ಸಿಕ್ಕಿತು; ಯಾರೋ ಒಬ್ಬಳ ಗಂಡ ಅವಿವೇಕವಾಗಿ ನಡೆದುಕೊಂಡ; ಯಾರೋ ಒಬ್ಬರ ಮಗ ಮನೆ ಬಿಟ್ಟು ದಂಡು ಸೇರಿದ. ಇದನ್ನು ಹೇಳುವಲ್ಲಿ ಹೇಳುವವನು ಸರಿಯಾಗಿ ಹೇಳಿದರೆ ಕೇಳುವವನಿಗೆ ರುಚಿಹುಟ್ಟುತ್ತದೆ; ಮಾತು ಹೆಚ್ಚು ಕಡಿಮೆಯಾದರೆ ಬೇಸರವಾಗುತ್ತದೆ. ಕಥೆಯೆನ್ನುವುದು ಬರಹದಲ್ಲಿ ಬಂದಾಗಲೂ ಸಾಮಾನ್ಯವಾಗಿ ಕಥನದ ಪದ್ಧತಿಯನ್ನು ಅನುಸರಿಸಿದರೆ ಓದುವವರ ಮನಸ್ಸನ್ನು ಹಿಡಿಯುತ್ತದೆ. ಹೇಳುವಾಗಣ ಪದ್ಧತಿಯನ್ನು ಹಾಗೆ ಹಾಗೆಯೇ ಬರಹದಲ್ಲಿ ತರುವುದು ಸಾಧ್ಯವಲ್ಲ. ಅಲ್ಲಿ ಹೇಳುವವನ ಧ್ವನಿಯಿದೆ, ಚರ್ಯೆಯಿದೆ, ಮುಖಮುದ್ರೆಯಿದೆ; ಮಧ್ಯೆ ಕೇಳುವವರ ಪ್ರಶ್ನೆಯಿದೆ, ಆಶ್ಚರ್ಯವಿದೆ; ಹೂಂ ಗುಟ್ಟುವಿಕೆ ಇದೆ. ಬರಹದ ಕಥೆ ಜೀವದ ಈ ಹೊಳಪುಗಳಿಲ್ಲದೆ ತನ್ನ ಕೆಲಸವನ್ನು ಸಾಧಿಸಬೇಕು; ಅದಕ್ಕಾಗಿ ಅದು ಅಲ್ಲಲ್ಲಿ ಎರಡು ಮಾತನ್ನು ಹೆಚ್ಚಾಗಿ ಹಾಕಬೇಕಾಗುತ್ತದೆ. ಆದರೂ ಈ ಮಾರ್ಪಾಡು ಎನ್ನುವುದು ಸಹಜವಾದ ಕಥನದ ಪದ್ಧತಿಯನ್ನು ಒಟ್ಟಿನಲ್ಲಿ ಗೌರವಿಸುತ್ತದೆ. ಇದು ಒಂದು ಪದ್ಧತಿ. ಇದನ್ನು ಕತೆ ಹೇಳುವ ಪದ್ಧತಿಯೆನ್ನಬಹುದು.

ಇನ್ನೊಂದು ಪದ್ಧತಿ ಕತೆ ಕಟ್ಟುವ ಪದ್ಧತಿ. ಜನದ ಬದುಕು ಬೆಳೆದ ಹಾಗೆ ಕತೆಯ ವಸ್ತುವಾದ ಈ ನಡೆದ ಸಂಗತಿಯೆನ್ನುವುದು ಭಾವನಾ ಪ್ರಪಂಚದ ವಿಷಯಗಳನ್ನೂ ಒಳಗೊಳ್ಳುವುದು ವಾಡಿಕೆಯಾಗುತ್ತದೆ.

ಕಥೆಗಾರನು ಜನರ ಭಾವನೆಗಳನ್ನೂ ಆಸೆಗಳನ್ನೂ ಊಹೆಗಳನ್ನೂ ಎಣಿಕೆಗಳನ್ನೂ ವ್ಯಕ್ತಿಗಳೆಂಬಂತೆ ನಿಜವಾಗಿ ಗ್ರಹಿಸಿ ಅವುಗಳ ವಿಷಯವನ್ನು ಹೇಳತೊಡಗುತ್ತಾನೆ. ಇಂಥ ಸಂದರ್ಭವನ್ನು ಹೇಳುವುದು ಕಷ್ಟ. ಅದನ್ನು ಯೋಚಿಸಿಕೊಂಡು ಒಂದು ಮೂರ್ತಿಯನ್ನು ಮಾಡಿ ಆ ಮೇಲೆ ಅದನ್ನು ಹೊರಗೆ ತರಬೇಕಾಗುತ್ತದೆ. ಈ ವೇಳೆಗೆ ಸಾಹಿತ್ಯ ಬರಹದ ವಿಷಯವಾಗಿರುತ್ತದೆ. ಕತೆಗಾರನು ತನ್ನ ಕೊಟಡಿಯಲ್ಲಿ ಕುಳಿತುಕೊಳ್ಳುತ್ತಾನೆ. ಕಥೆಯನ್ನು ಮೆಲ್ಲನೆ ಬೆಳೆಸುತ್ತಾನೆ. ಕಟ್ಟೆಯ ಮೇಲೆಯೋ ಚಾವಡಿಯಲ್ಲಿಯೋ ಹೇಳುವಾಗ ಎದುರಿಗಿರುವ ಜನವನ್ನು ಕಾಯಿಸದೆ, ಇರುವಷ್ಟು ಹೊತ್ತಿನಲ್ಲಿ, ಕತೆಗಾರನು ಕತೆಯನ್ನು ಮುಗಿಸಬೇಕು. ಎದುರಿಗೆ ಜನವಿಲ್ಲದೆ ಹೊತ್ತಿನ ನಿಯಮವಿಲ್ಲದೆ ಬರೆಯುವುದಕ್ಕೆ ಕುಳಿತಾಗ ಕಥೆಯ ವಿವರಗಳನ್ನು ಸಾವಧಾನವಾಗಿ ಬೆಳೆಸಬಹುದು. ಇದು ವಾಡಿಕೆಯಾದರೆ ಹೇಳುವ ವಿವರ ಮಾರ್ಪಟ್ಟಂತೆ ಕಥೆಯ ಭಾಷೆಯೂ ಮಾರ್ಪಡುತ್ತದೆ. ಜೊತೆಗೆ ಕಥೆಯ ಪದ್ಧತಿಯೂ ಮಾರ್ಪಡುತ್ತದೆ. ಕಥೆಯ ಈ ರೂಪು ಸಾಹಿತ್ಯ ಎನ್ನುವುದು ಬರಹವಾದುದರಿಂದ ಬಂದ ಫಲ. ಹೊಸ ಕಾವ್ಯ ಹೇಗೆ ಬರಹದ ಕಾವ್ಯವಾಗಿದೆಯೋ ಹಾಗೆ ಹೊಸ ಕಥೆಯೂ ಬರಹದ ಕಥೆಯಾಗಿದೆ. ಆದರೆ ಇಲ್ಲಿಯೂ ಕಥನದಲ್ಲಿ ಕೌಶಲವಿರಬೇಕು. ಹೊರಗೆ ನಡೆದ ಸಂಗತಿಯನ್ನು ತಿಳಿಯುವುದಕ್ಕೆ ನೆನೆಯುವುದಕ್ಕೆ ನುಡಿಯುವುದಕ್ಕೆ ಅದರ ವಿಷಯದಲ್ಲಿ ಎಷ್ಟು ವಿವರವಾದ ಜ್ಞಾನವಿರಬೇಕೋ ಅದೇ ರೀತಿಯ ವಿವರವಾದ ತಿಳಿವು ಇಲ್ಲಿ ಚೇತನದ ಆಂತರ್ಯದ ವಿಷಯದಲ್ಲಿ ಇರಬೇಕು. ಇಲ್ಲಿ ಕತೆಯಲ್ಲಿ ಸಹಜತೆ ಸರಳತೆಗೆ ಪ್ರತಿಯಾಗಿ ನಾಗರಿಕತೆಯ ಫಲವಾದ ಒಂದು ತೆರದ ಚಿತ್ತಾರ ಒಂದು ರೀತಿಯ ಬಿನ್ನಾಣ ಕಾಣುತ್ತವೆ. (ಇಲ್ಲಿ ಈ ಮಾತುಗಳನ್ನು ಒಳ್ಳೆಯ ಅರ್ಥದಲ್ಲಿ ಉಪಯೋಗಿಸಿದೆ.) ಎಂದರೆ ಕತೆಗಾರನು ತಾನು ತೆಗೆದುಕೊಂಡ ವಿಷಯವನ್ನು ನಾದುತ್ತಾನೆ, ತಿದ್ದುತ್ತಾನೆ, ಒದಗಿಸಿಕೊಳ್ಳುತ್ತಾನೆ. ಇದು ಕತೆಯಲ್ಲಿ ಎರಡನೆಯ ರೀತಿ. ಸಾವಧಾನವಾಗಿ ರಚಿಸಿದ ಕೃತಿಯಾದುದರಿಂದ ಇಂಥ ಕಥೆಯಲ್ಲಿ ಕಲೆ ಸ್ಪಷ್ಟವಾಗಿರುತ್ತದೆ. ಕಥೆಗಾರನು ಕಥೆಯನ್ನು ಆರಂಭಿಸುವುದರಲ್ಲಿ, ನಡೆಸುವುದರಲ್ಲಿ, ಬೆಳೆಸುವುದರಲ್ಲಿ, ಉದ್ದಕ್ಕೂ ತನ್ನ ಕೈವಾಡವನ್ನು ತೋರಿಸುತ್ತಿರುತ್ತಾನೆ. ಮಾತಂತೂ ಯೋಚಿಸುತ್ತ ಆರಿಸುತ್ತ ಜೋಕೆಯಿಂದ ಸೇರಿಸಿದ ಮಾತೆನ್ನುವುದು ತೋರುತ್ತದೆ. ಹೀಗೆಂದಮಾತ್ರಕ್ಕೆ ಬರೆಯುವವನು

ಶ್ರಮಪಟ್ಟಿದ್ದಾನೆಂದಾಗಲಿ ಓದುವವರಿಗೆ ಶ್ರಮವಾಗುತ್ತದೆಂದಾಗಲಿ ಅರ್ಥವಲ್ಲ. ಬರೆಯುವವನು ಈ ರಚನೆಯಲ್ಲಿ ಸುಖವನ್ನೇ ಅನುಭವಿಸಿರುತ್ತಾನೆ; ಅಭಿರುಚಿಯನ್ನರಿತ ತನ್ನ ಕುಶಲಕರ್ಮದಿಂದ ಓದುವವನಿಗೆ ಆನಂದವನ್ನುಂಟುಮಾಡುತ್ತಾನೆ. ಇದು ಸಾಹಿತ್ಯದ ಪ್ರೌಢಾವಸ್ಥೆಯ ಪದ್ಧತಿ.

ಆನಂದರ ಕಥನ ಪದ್ಧತಿ ಈ ಎರಡನೆಯ ಪದ್ಧತಿ. ಈ ಪುಸ್ತಕದ ಐದು ಕಥೆಗಳಲ್ಲಿಯೂ ನಾವು ಈ ಪದ್ಧತಿಯ ಬಹು ಒಳ್ಳೆಯ ಫಲವನ್ನು ಕಾಣಬಹುದು. ಅದರ ಸ್ವರೂಪವು ಇಲ್ಲಿಯ ಕಥೆಗಳಲ್ಲಿ ಚೆನ್ನಾಗಿ ಕಾಣುತ್ತದೆ. ಕಲೆಗೆ ಮನಸೋಲುವ ತರುಣನೊಬ್ಬನು ಸುಂದರಿಯೊಬ್ಬಳ ಪಟವನ್ನು ನೋಡುತ್ತಾನೆ. ಚಿತ್ರಕಾರನು ದಕ್ಷನಾದರೆ ಚಿತ್ರವು ಚಿತ್ರವಾಗಿ ಉಳಿಯುವುದಿಲ್ಲ, ಸಜೀವವಾಗುತ್ತದೆ. ಪಟದ ಮೇಲೆ ಬಣ್ಣಗಳನ್ನು ಹಾಕಲು ಅವನು ಎಂದೋ ಆಡಿಸಿದ ಕೈಬೆರಳುಗಳು ಇಂದು ನಮಗೆ ಮಂತ್ರಹಾಕುತ್ತ ಮುಖದ ಬಳಿ ಕೈಯಾಡಿಸುವ ಮಾಂತ್ರಿಕನ ಬೆರಳುಗಳಂತೆ ಮಂಕನ್ನು ಕವಿಸುತ್ತವೆ. ನೋಡುವವನು ತಾನು ಜೀವವಿರುವ ವಸ್ತು, ಪಟ ಜೀವವಿಲ್ಲದ ವಸ್ತು ಎನ್ನುವುದನ್ನು ಮರೆಯುತ್ತಾನೆ. ಈ ಅನುಭವವು ತೀವ್ರವಾದ ಒಂದು ಕ್ಷಣದಲ್ಲಿ ಇವನು ಪಟದೊಂದಿಗೆ ಪ್ರಪಂಚದ ಸಜೀವ ವ್ಯಕ್ತಿಯೊಂದಿಗೆ ಬೆಳೆಸುವಂಥ ಒಂದು ಸಂಬಂಧವನ್ನು ಬೆಳೆಸುತ್ತಾನೆ; ಎಚ್ಚರಗೊಂಡಾಗ ಭಾವದ ಆ ಉದ್ವೇಗವನ್ನು ನೆನೆದು ಆಶ್ಚರ್ಯಪಡುತ್ತಾನೆ. ಕಲೆಯ ವಿಷಯವಾಗಿ ಈ ಮಾತನ್ನು ಉಪನ್ಯಾಸದಲ್ಲಿ ಹೇಳುವುದು ಒಂದು ರೀತಿ. ಕಥೆಗಾರನು ಇದನ್ನು ಒಂದು ಕಥೆಯಾಗಿ ಹೇಳುತ್ತಾನೆ. ಇದೇ ಮಾಟಗಾತಿಯ ವಿಷಯ. ಈ ವಸ್ತು ಅದರಲ್ಲಿ ಹದಿನೇಳು ಪುಟದಷ್ಟು ಬೆಳೆದಿದೆ; ಯಾವ ಪುಟದಲ್ಲಿಯೂ ಜೊಂಡಾಗಿಲ್ಲ; ಎಲ್ಲಿಯೂ ಬಿಗಿ ತಪ್ಪಿಲ್ಲ; ಕೊನೆಯವರೆಗೂ ಒಗಟೆ ಏನೆಂದು ತಿಳಿಯುವುದಿಲ್ಲ. ಹೆಂಡತಿಯ ಕಾಗದದಲ್ಲಿ ವಿಷಯ ಇದಕ್ಕಿಂತ ಲಘು; ಒಗಟೆ ಇಷ್ಟು ಕಷ್ಟದ್ದೂ ಅಲ್ಲ; ಆದರೆ ಹೇಳುವ ರೀತಿ ಇಷ್ಟೇ ವಿಸ್ತಾರ. ಅಲ್ಲಿಯೂ ಕಥನವು ಇಷ್ಟೇ ಕುಶಲವಾದ ಕರ್ಮ. ಇಲ್ಲಿರುವಂತೆಯೇ ಉಳಿದ ಕಥೆಗಳಲ್ಲಿಯೂ ಪ್ರೌಢ ಸಾಹಿತ್ಯದ ಕಥನ ನೈಪುಣ್ಯವು ವ್ಯಕ್ತವಾಗುತ್ತದೆ.

ನಮ್ಮಲ್ಲಿ ಹೊಸ ರೀತಿಯ ಸಣ್ಣ ಕಥೆ ಆರಂಭವಾದದ್ದು ಈಚಿನ ಮಾತು. ಅದನ್ನು ಬರೆಯತೊಡಗುವ ತರುಣರು ಮೊದಮೊದಲಲ್ಲಿ ಎಳೆ

ತನದ ಪ್ರೇಮವನ್ನು ಚಿತ್ರಿಸುವುದೇ ಮುಖ್ಯ ವಿಷಯವೆಂಬಂತೆ ನಡೆದು ಕೊಳ್ಳುವರು. ಇದೇನೂ ತಪ್ಪಲ್ಲ. ಆದರೆ ಇದರಂತೆ ವಿಷಯ ಇನ್ನೂ ನೂರಾರು ಇವೆ. ನಾನು ಎಂದೋ ಈ ಮಾತನ್ನು ಆನಂದರವರಿಗೆ ಹೇಳಿದೆನಂತೆ. ಅವರು ಅದನ್ನು ನೆನಪಿನಲ್ಲಿ ಇಟ್ಟುಕೊಂಡು ನಾನು ಅವರ ಕಥೆಗಳಲ್ಲಿರುವ ತಪ್ಪುಗಳನ್ನು ನಿರ್ದಾಕ್ಷಿಣ್ಯವಾಗಿ ಹೇಳಬೇಕೆಂದು ನನ್ನನ್ನು ಕೇಳಿದ್ದಾರೆ. ನಾನು ತಪ್ಪುಗಳನ್ನು ನೋಡುವವನೇ, ಹೇಳುವವನೇ. ಆದರೆ ನಾವು ಸಾಮಾನ್ಯವಾಗಿ ತಪ್ಪು ಎನ್ನುವುದನ್ನು ನಾನು ಈಗ ಕೃತಿಯಲ್ಲಿ ತಪ್ಪು ಎಂದು ಕರೆಯುವುದಿಲ್ಲ. ಅಲ್ಲಿ ಆ ಸಂಬಂಧದ ಗುಣ ಇಲ್ಲ ಎಂದು ಹೇಳುತ್ತೇನೆ. ಹೇಳುವ ವಿಷಯ ಒಂದೇ; ಆದರೆ ವಿಮರ್ಶೆಯ ನಿಲುವು ಬೇರೆಯಾಗಿದೆ. ಸಾಹಿತ್ಯದಲ್ಲಿ ಎಷ್ಟು ಜನರಿದ್ದಾರೋ ಅಷ್ಟು ದಾರಿಯಿದೆ. ಶಕ್ತನಾದ ಲೇಖಕನು ರಚಿಸಿದ ಕೃತಿಯಲ್ಲಿ ಗುಣವನ್ನು ತೆಗೆದುಕೊಳ್ಳುವುದು ವಿಮರ್ಶೆಯಲ್ಲಿ ಹಿರಿಯತನ. ಹಂಸಕ್ಷೀರದ ನ್ಯಾಯವು ಹಳೆಯದೇನೋ ನಿಜ. ಆದರೆ ಅದು ಹಳೆಯ ಒಟ್ಟೆಯಂತೆ ಹಳೆಯದಲ್ಲ; ಸತ್ಯದಂತೆ ಹಳೆಯದು, ಸೂರ್ಯನಂತೆ ಹಳೆಯದು. ಅದಕ್ಕೆ ಸಾಹಿತ್ಯದಲ್ಲಿ ನಿತ್ಯವಾದ ಒಂದು ಸ್ಥಾನವಿದೆ. ಆನಂದರವರಂಥ ಶಕ್ತರಾದ ಲೇಖಕರಿಗೆ ತಮ್ಮ ತಮ್ಮ ಗ್ರಂಥದ ವ್ಯಾಪ್ತಿ ಎಷ್ಟೆನ್ನುವುದು ತಾನೇ ತಿಳಿಯುತ್ತದೆ. ಅಭ್ಯಾಸ ಬೆಳೆದ ಹಾಗೆ, ಅನುಭವ ಹೆಚ್ಚಿದ ಹಾಗೆ ಕೃತಿ ರಸವತ್ತಾಗುತ್ತದೆ, ಪುಷ್ಟವಾಗುತ್ತದೆ, ಶಕ್ತವಾಗುತ್ತದೆ. ಇವರ ಹಿಂದಣ ಕಥೆಗಳಿಂದ ಈ ಕಥೆಗಳಿಗೆ ಇವರು ಎಷ್ಟೋ ದೂರ ನಡೆದಿದ್ದಾರೆ ಎನ್ನುವುದು ಯಾರಿಗಾದರೂ ತಿಳಿಯುವ ವಿಷಯ. ಅಲ್ಲಿ ಅತ್ಯುತ್ತಮವಾದ ಕಥನಶಕ್ತಿ ಮೂಡಿತು; ಅದು ಇಲ್ಲಿ ಬೆಳೆಯುತ್ತಿದೆ. ಜೀವನದ ಆಳವೂ ಹರವೂ ಇವರ ಕಣ್ಣಿಗೆ ಕಂಡಕಂಡ ಹಾಗೆಲ್ಲಾ ಕಥೆಯ ಕ್ಷೇತ್ರವೂ ವಿಸ್ತಾರವಾಗುತ್ತದೆ; ಕಥೆ ಬಾಳುವೆಗೆ ಹತ್ತಿರವಾಗುತ್ತ ಬರುತ್ತದೆ.

ಕನ್ನಡದ ಹೊಸ ಸಾಹಿತ್ಯವು ಪ್ರಪಂಚದ ಸಾಹಿತ್ಯದಲ್ಲಿ ಗಣ್ಯವಾದ ಸ್ಥಾನವನ್ನು ಪಡೆಯಬೇಕು. ಅದನ್ನು ಸಾಧಿಸುವುದಕ್ಕೆ ನಮ್ಮ ಕತೆಗಾರರೂ ಕವಿಗಳೂ ಇತರ ಲೇಖಕರೂ ಹಠದಿಂದ ಕೆಲಸಮಾಡಬೇಕು. ಈ ಕೆಲಸ ಶ್ರೇಷ್ಠವಾದದ್ದು; ನಮ್ಮ ಜೀವಿತವನ್ನು ವಿನಿಯೋಗ ಮಾಡಲು ಯೋಗ್ಯವಾದದ್ದು. ಆನಂದರವರು ತಮ್ಮ ಅನುಭವಕ್ಕೆ ಬಂದ ವಿಷಯವನ್ನು ತಮಗೆ ಸುಖವಾಗುವಂತೆ, ಓದುವವರಿಗೆ ರುಚಿಸುವಂತೆ, ವಸ್ತು

## ಮುನ್ನುಡಿ

ಕೆಡದಂತೆ, ಕಲೆ ಬೆಳೆಯುವಂತೆ, ಕಥೆಯ ರೂಪದಲ್ಲಿ ಹೇಳುತ್ತಿದ್ದಾರೆ. ನಮ್ಮ ಕಥೆ ಬೆಳೆಯುವುದಕ್ಕೆ ಇಂಥ ಕೆಲಸ ಬಹಳ ಬೇಕು. ಇದನ್ನು ಆನಂದರವರೂ ಇಂಥ ಇತರ ತರುಣ ಲೇಖಕರೂ ನಡೆಸಬೇಕಾಗಿದೆ. ಹಿರಿಯರೆಂದು ನಮ್ಮ ಬಳಿಗೆ ಬರುವ ತೇಜಸ್ವಿಗಳಾದ ತರುಣರಿಗೆ ನಾವು, "ನಿಮ್ಮ ಧ್ಯೇಯ ದೊಡ್ಡದು; ನಿಮಗೆ ಶಕ್ತಿಯಿದೆ; ದೂರದ ಗುರಿಯ ಮೇಲೆ ಕಣ್ಣಿಟ್ಟು ದೊಡ್ಡ ರೀತಿಯಲ್ಲಿ ಮುಂದೆ ನಡೆಯಿರಿ; ನಿಮ್ಮ ಆಸೆ ಕೈ ಸೇರಲಿ" ಎಂದು ಮಾತ್ರ ಹೇಳಬಹುದು. ನಾನು ಆನಂದರಿಗೆ ಈ ಮಾತನ್ನು ಹೇಳುತ್ತೇನೆ. ಈ ಆಸೆ ಈಡೇರುವುದೆಂದು ನನಗೆ ಧೈರ್ಯವುಂಟು. ಏಕೆಂದರ ಅದು ಒಬ್ಬ ಲೇಖಕನ ಮಾತ್ರದ ಆಸೆಯಲ್ಲ. ಅದು ನಮ್ಮ ನಾಡಿನ ಆಸೆ, ನಮ್ಮ ನುಡಿಯ ಆಸೆ. ಅದು ನಮ್ಮ ಜನತೆಯ ಆಸೆ. ಅದಕ್ಕೆ ಸೋಲಿಲ್ಲ.

ಬೆಂಗಳೂರು, ಶ್ರೀಮುಖ ಸಂವತ್ಸರ
ಫಾಲ್ಗುಣ ಶುದ್ಧ ಪಾಡ್ಯಮಿ.

ಶ್ರೀನಿವಾಸ.

# ಬಿನ್ನಹ

ಕೆಲವು ವರ್ಷಗಳ ಹಿಂದೆ ನನ್ನ ಗೆಳೆಯರಿಬ್ಬರು ನನ್ನ ಮೇಲಣ ವಿಶ್ವಾಸದಿಂದ, ನನ್ನ ಕಥೆಗಳಲ್ಲಿ ಐದನ್ನು ಆಯ್ದು "ಕೆಲವು ಕಥೆಗಳು" ಎಂದು ಹೆಸರಿಟ್ಟು ಪ್ರಕಟಿಸಿ ನನಗೆ ಬಹಳ ಉಪಕಾರಮಾಡಿದರು. ನಮ್ಮ ನಾಡಿನ ಜನರು ಆ ಪುಸ್ತಕದ ವಿಷಯದಲ್ಲಿ ಬಹಳ ಆದರವನ್ನು ತೋರಿದರೆಂಬ ಸಂಗತಿ ನನಗೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ತಿಳಿದು ಬಂದಿತು.

ಈಗ ಶಿವಮೊಗ್ಗೆಯ ಕರ್ಣಾಟಕ ಸಂಘದವರು ನನ್ನ ಕಥೆಗಳಲ್ಲಿ ಇನ್ನು ಐದನ್ನು ಸೇರಿಸಿ "ಮಾಟಗಾತಿ!" ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಶಿವಮೊಗ್ಗೆಯು ನಾನು ಹುಟ್ಟಿ ಬೆಳೆದ ಊರು—ಆಟಪಾಟಗಳನ್ನು ಕಲಿತು ನನ್ನ ಬಾಲ್ಯದ ದಿನಗಳನ್ನು ಕಳೆದ ನನ್ನ ತೌರುಮನೆ. ಆದುದರಿಂದ, ಇಲ್ಲಿ ಸ್ಥಾಪಿತವಾಗಿ, ಸ್ಥಳೀಯ ಸುಹೃದಯರ ಆದರ—ಬೆಂಬಲಗಳನ್ನು ಪಡೆದು, ಯಶಸ್ವಿಯಾಗಿ ನಡೆಯುತ್ತಿರುವ ಕರ್ಣಾಟಕ ಸಂಘವು ನನ್ನ ಸಣ್ಣ ಕಥೆಗಳನ್ನು ಪ್ರಕಟಿಸಿರುವುದು ನನ್ನ ಸೌಭಾಗ್ಯವೆಂದು ಹೆಮ್ಮೆಪಟ್ಟುಕೊಳ್ಳುವ ವಿಷಯ. ಈ ಉಪಕಾರಕ್ಕಾಗಿ ನಾನು ಸಂಘಕ್ಕೆ ಚಿರಋಣಿಯಾಗಿದ್ದೇನೆ.

ನಮ್ಮ ನಾಡಿನ ಜನರು ನನ್ನ ಮೊದಲನೆಯ ಪುಸ್ತಕಕ್ಕೆ ತೋರಿದ ಆದರವಿಶ್ವಾಸಗಳನ್ನು ಈ ಸಂಗ್ರಹಕ್ಕೂ ತೋರದೆ ಇರಲಾರರೆಂಬ ಭರವಸೆ ನನಗಿದೆ. ಇಲ್ಲಿ ಅಡಕವಾಗಿರುವ ಕಥೆಗಳ ವಿಷಯವಾಗಿ ನಾನು ಹೆಚ್ಚು ಏನನ್ನೂ ಹೇಳ ಬಯಸುವುದಿಲ್ಲ. ಇವುಗಳನ್ನು ಓದಿದ ಸಹೃದಯರು ಈ ಪುಸ್ತಕಕ್ಕೆ ತಾವು ತೋರಿದ ಆದರ—ತಾವು ಕೊಟ್ಟ ಹಣ!—ವ್ಯರ್ಥವಾಗಲಿಲ್ಲವೆಂದು ಮನಗಂಡರೆ, ಅದು, ನಾನು ಈ ಕಥೆಗಳನ್ನು ಬರೆಯಲು ಖರ್ಚುಮಾಡಿದ ಕಾಗದ—ಮಸಿ—ಕಾಲ ಇವುಗಳಿಗೆ ಯಥೇಷ್ಟವಾದ ಪ್ರತಿಫಲವೆಂದು ಭಾವಿಸುತ್ತೇನೆ.

ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಹೆಸರನ್ನು ಇಲ್ಲಿ ನೆನೆಯಲು ನನಗೆ ಬಹಳ ಆನಂದವಾಗುತ್ತದೆ. ನನಗಾಗಿ—ನನ್ನ ಬರೆವಣಿಗೆ

ಗಳಿಗಾಗಿ—ಅವರು ತೋರುತ್ತಿರುವ ಹಿತಚಿಂತನೆಯನ್ನು ಸದಾ ಅತ್ಯಂತ ಕೃತಜ್ಞತೆಯಿಂದ ಮನನಮಾಡುತ್ತೇನೆ. ಆ ಮಹಾಶಯರು, ತಮಗೆ ಸಹಜವಾದ ಸ್ನೇಹದಿಂದಲೂ, ಅದಕ್ಕೂ ಮಿಗಿಲಾದ ವಾತ್ಸಲ್ಯದಿಂದಲೂ, ಅಲ್ಪನಾದ ನನ್ನ ಪ್ರಾರ್ಥನೆಯನ್ನು ಲಾಲಿಸಿ, ಕನ್ನಡ ನಾಡಿನ ಜನರಿಗೆ ಈ ಚಿಕ್ಕ ಪುಸ್ತಕದ ಪರಿಚಯವನ್ನು ಮಾಡಿಕೊಟ್ಟುದಕ್ಕಾಗಿ ನಾನು ಅವರಿಗೆ ಅತ್ಯಂತ ಋಣಿಯಾಗಿದ್ದೇನೆ.

ಕಡೆಯ ಮಾತು. ಈ ಪುಸ್ತಕವೇನೋ ಅಲ್ಪವಾದುದು. ಶಿವಮೊಗ್ಗೆಯ ಕರ್ಣಾಟಕ ಸಂಘದವರು ಇದಕ್ಕೆ ಮಿಗಿಲಾಗಿ ನೂರಾರು—ಸಹಸ್ರಾರು—ಉತ್ತಮ ಗ್ರಂಥಗಳನ್ನು ಪ್ರಕಟಿಸುವಂತಾಗಲಿ;—ನಮ್ಮೂರಿನವರ ಜಂಬವೊಂದನ್ನೇ ಅಲ್ಲ—ಸಮಗ್ರ ಕರ್ಣಾಟಕದ ಜಂಬವನ್ನೂ ಗೌರವವನ್ನೂ ಗಳಿಸಿ, ಚಿರಕಾಲ ಯಶಸ್ವಿಯಾಗಿ ಬಾಳಿ ಕೆಲಸ ಮಾಡಿ ಕೀರ್ತಿಪಡೆಯಲಿ—ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಶಿವಮೊಗ್ಗ, ಇತಿ—
ನವೆಂಬರ್, ೧೯೩೩. ಆನಂದ.

# ವಿವರ



[ಈ ಸಂಗ್ರಹದಲ್ಲಿರುವ ಕಥೆಗಳಲ್ಲಿ "ಮಾಟಗಾತಿ!" ಮತ್ತು "ಬದುಕು!" ಎಂಬುವು ಧಾರವಾಡದ ಸುಪ್ರಸಿದ್ಧ 'ಜಯ ಕರ್ಣಾಟಕ'ದಲ್ಲಿಯೂ ಉಳಿದ ಮೂರು ಕಥೆಗಳು ಹಿಂದೆ ಬೆಂಗಳೂರಲ್ಲಿ ನಡೆಯುತ್ತಿದ್ದ 'ಕಥಾಂಜಲಿ' ಎಂಬ ಮಾಸ ಪತ್ರಿಕೆಯಲ್ಲಿಯೂ ಮೊದಲು ಅಚ್ಚಾದುವು. ತಮ್ಮ ಮಾಸ ಪತ್ರಿಕೆಗಳಲ್ಲಿ ನನ್ನ ಕಥೆಗಳಿಗೆ ಎಡೆಗೊಟ್ಟುದಕ್ಕಾಗಿ ನಾನು ಅವುಗಳ ಸಂಪಾದಕರಿಗೆ ಕೃತಜ್ಞನಾಗಿದ್ದೇನೆ.—ಆನಂದ]

# ಮಾಟಗಾತಿ !

ಸುರಿಸಿದ ಹಾಗೆಲ್ಲ ಹೊಸಗಂಪು ಹೊರಸೂಸಿ
    ನೆನೆದರೆ ತನುಮನ ಗಮಗಮಿಸಲೋ,
ಪ್ರಣಯಿನಿ ನಯದಲ್ಲಿ ಕಿರುನಗೆ ಮಿಂಚಿಸಿ
    ಸರಸಕಿತ್ತರು ಪ್ರಣಯದ ಕುರುಹೋ,
ನಾಣಬಿನ್ನಣ ಬಳ್ಳಿವರಿವಂತೆ ಕೈಚಾಚಿ
    ನಲ್ಲೆ ನಲ್ಲಂಗಿತ್ತ ತಾಂಬೂಲವೋ—
ರಸನೆ ರಂಜಿಸಲೆಂದು ರಸಿಕನಿಗಿತ್ತೊಂದು
    ಕತೆಗಳೀ ಕವಳವು ಕಂಗೊಳಿಸಲೋ.

—ದ. ರಾ. ಬೇಂದ್ರೆ.

# ಮಾಟಗಾತಿ !

ಇಂದಿಗೆ ಇಪ್ಪತ್ತು ದಿನಗಳಾದುವು—ಹೌದು, ಇಪ್ಪತ್ತು—ಇವತ್ತು ಯಾವ ವಾರ ?—ಗುರುವಾರ—ಹೌದು ಸರಿಯಾಗಿ ಇಪ್ಪತ್ತು ದಿನಗಳು. ಈ ಇಪ್ಪತ್ತು ದಿನಗಳಿಂದ ಅವಳನ್ನು ನೋಡುತ್ತಿದ್ದೇನೆ ; ಒಂದು ದಿನವೂ ತಪ್ಪಿಲ್ಲ. ಅವಳು ಯಾರು ?—ಹೆಸರೇನು ?—ಹೇಗಿದ್ದಾಳೆ ? . . . ಸ್ವಲ್ಪ ನಿಧಾನಿಸಿ ; ಎಲ್ಲವನ್ನೂ ಹೇಳುತ್ತೇನೆ. ಅದಕ್ಕೆ ಮುಂಚೆ ಹೇಳಬೇಕಾದ ವಿಷಯಗಳು ಒಂದೆರಡಿವೆ. ನಾನು ಎಲ್ಲಿ ಕುಳಿತು ಇದನ್ನೆಲ್ಲಾ ನಿಮಗೆ ಹೇಳುತ್ತಿದ್ದೇನೋ ಇಲ್ಲಿ—ಈ ಮನೆ—ಅಲ್ಲ—ಕೊಠಡಿಯಲ್ಲಿ ಒಬ್ಬನೇ ವಾಸವಾಗಿದ್ದೇನೆ. ಇಷ್ಟು ಸಾಕು ಸದ್ಯಕ್ಕೆ. ನನ್ನ ಊಟ—ತಿಂಡಿ—ಕೆಲಸ ಇವುಗಳ ವಿಚಾರ ಈಗ ಬೇಡ. ಅದರಿಂದ ನಿಮಗೂ ಉಪಯೋಗವಿಲ್ಲ, ನನಗಂತೂ ಮೊದಲೇ ಇಲ್ಲ.

ಇನ್ನು ಅವಳ ವಿಚಾರ. ಅವಳು ಯಾರು ? ಗೊತ್ತಿಲ್ಲ. ಹೆಸರೇನು ?—ತಿಳಿಯದು. ಹೇಗೆ ಇದ್ದಾಳೆ? ಅವಳು ಹಾಗೆ ಇದ್ದಾಳೆ—ಹೀಗೆ ಇದ್ದಾಳೆ—ಇನ್ನು ಹೇಗೋ ಇದ್ದಾಳೆ ಎಂದು ಒಂದು ಮಾತಿನಲ್ಲಿ ಹೇಳಿ ಮುಗಿಸಲಾರೆ. ಅಲ್ಲದೆ ಸ್ತ್ರೀವರ್ಣನೆಯ ವಿಚಾರದಲ್ಲಿ 'ಶ್ರೀನಿವಾಸ'ರು ಮಾಡಿರುವ ಕವಿಗಳ ಭರ್ತ್ಸನೆಯನ್ನು ಓದಿದ ಮೇಲಂತೂ ಕೈ ಸ್ವಲ್ಪ ಹಿಮ್ಮೆಟ್ಟುತ್ತಿದೆ. ಆದರೂ 'ಅವರ ಭರ್ತ್ಸನೆ ಕವಿಗಳಿಗೆ ತಾನೆ! ನಾನು ಕವಿಯಲ್ಲವಲ್ಲ!' ಎಂದು ಹೇಳಿಕೊಂಡು ಧೈರ್ಯಮಾಡುತ್ತೇನೆ.

ನಾನು ನಿಮಗೆ ವರ್ಣಿಸುವುದಾದರೂ ಆಕೆಯ ಮುಖವನ್ನು ಮಾತ್ರ. ಏಕೆಂದರೆ ಈ ಇಪ್ಪತ್ತು ದಿನಗಳಿಂದ ನನ್ನ ದೃಷ್ಟಿಯನ್ನು ಸೆಳೆದಿರುವುದು ಆ ಮುಖ ಮಾತ್ರ. ಇದುವರೆಗೂ ನಾನು ಅವಳೊಡನೆ ಮಾತನಾಡಿಲ್ಲ; ಆಕೆಯ ದನಿಯನ್ನು ಕೇಳಿಲ್ಲ. ಎಲ್ಲಿ ಹುಟ್ಟಿದಳೋ, ಎಲ್ಲಿ ಬೆಳೆದಳೋ ಅರಿಯೆ. ಆದರೂ ಈ ಇಪ್ಪತ್ತು ದಿನಗಳಿಂದ ಆಕೆಯನ್ನು ತಪ್ಪದೆ ನೋಡಿದ್ದೇನೆ. ಸಲಸಲವೂ ನಮ್ಮ ದೃಷ್ಟಿಗಳು ಒಂದಾಗಿವೆ ; ಸಲಸಲಕ್ಕೆ ಅವಳು ನನಗೆ ಹೆಚ್ಚು ಹೆಚ್ಚು ಆತ್ಮೀಯಳಾಗಿದ್ದಾಳೆ.

ಅವಳ ಮುಖವನ್ನು ಏನೆಂದು ವರ್ಣಿಸಲಿ ? ನೀವು ಒಂದು ಮಾತಿನಲ್ಲಿ

ಗ್ರಹಿಸಬಲ್ಲವರಾದರೆ ಹೇಳುತ್ತೇನೆ ಕೇಳಿ—ಅವಳು ಸುಂದರಿ. 'ಎಂತಹ ಸುಂದರಿ ?' ಎಂದರೆ ಮಾತ್ರ ಹೇಳಲಾರೆ. ಸೌಂದರ್ಯದಲ್ಲಿ ಭೇದವುಂಟು. ಇಸ್ಪಿಯುಳ ರೂಪವೆ ?—ತಾಯಿ ಸೌಂದರ್ಯವೆ ?—ವೇಶ್ಯೆಯ ಬೆಡಗೆ ? ನಾನು ಹೀಗೇ ಸರಿ ಎಂದು ಹೇಳಲಾರೆ. ರವೀಂದ್ರ ಕವಿಯು ಊರ್ವಶಿ ಯನ್ನು ವರ್ಣಿಸುತ್ತ 'ಎಲೌ ಊರ್ವಶಿಯೇ, ಮಾತೆಯಲ್ಲ, ಮಗಳಲ್ಲ, ಮಡದಿಯಲ್ಲ ನೀನು ! ಅಮರಲೋಕದ ಆತ್ಮವನ್ನು ಸೂರೆಗೊಳ್ಳುವ ಸ್ತ್ರೀಯು ನೀನು !' ಎಂದು ಹೇಳಿದ್ದಾನೆ. ನಾನು ಅವಳನ್ನು ಊರ್ವಶಿಗೆ ಹೋಲಿಸಲಾರೆ ; ಏಕೆಂದರೆ ಆ ಸ್ವರ್ಗವಾಸಿಯನ್ನು ನಾನು ಇನ್ನೂ ನೋಡಿಲ್ಲ—ನೋಡುವ ಸಂಭವವೂ ಇಲ್ಲ ! ಒಂದು ವೇಳೆ (ಗೊತ್ತು ಇಲ್ಲಾ ಅಂತ !—ಆದರೂ) ನೋಡಿದರೂ ಆಗ ನಿಮಗೆ ಹೇಳಲಾರೆ. ಕಾರಣವೇನೆಂದರೆ, ಆಗ ನನಗೂ ನಿಮಗೂ ವ್ಯವಹಾರ ನಿಂತುಹೋಗಿರು ತ್ತದೆ. ಹಾಗಾದರೆ ಅವಳನ್ನು ಇನ್ನು ಹೇಗೆ ವರ್ಣಿಸಲಿ ? ಅವಳ ಮುಖ ಚಂದ್ರಬಿಂಬಕ್ಕೆ ಸಮನಾಗಿಲ್ಲ. ಕಣ್ಣಿನ ಸೊಬಗು ಕಮಲದಿಂದ ಕದ್ದ ದ್ದಲ್ಲ. ಅವಳ ನಾಸಿಕಕ್ಕೂ ಸಂಪಗೆಯ ಹೂವಿಗೂ ಪರಿಚಯವೇ ಇಲ್ಲ. ಅವಳ ತುಟಿಗಳ ಅಂದ ತೊಂಡೆಯ ಹಣ್ಣಿನಿಂದ ಬಂದ ಬಳುವಳಿಯೂ ಅಲ್ಲ. ಮತ್ತೆ ಇನ್ನು ಹೇಗೆ ? ನೋಡಿ, ಸಾವಿರ ವರ್ಣನೆಗಳೂ ಒಂದು ಸಲದ ನೋಟಕ್ಕೆ ಸರಿತೂಗಲಾರವು. ನೀವು ಮಾವಿನ ಹಣ್ಣನ್ನು ತಿಂದಿ ಲ್ಲವೆ ? ಅದರ ರುಚಿಯೇನು ?—ಎಂದರೆ, ಸಿಹಿ—ಎನ್ನುವಿರಿ. ಆದರೆ ಎಂತಹ ಸಿಹಿ ? ಸಕ್ಕರೆಯ ಸಿಹಿಯೆ ? ಕಬ್ಬಿನ ಸಿಹಿಯೆ ? ಕಿತ್ತಿಳೆಯ ರುಚಿಯೆ ? ಸೇಬಿನ ಸವಿಯೆ ? . . ಯಾವುದು ? ಎಲ್ಲವೂ ಮಧುರ ; ಆದರೆ ಬೇರೆ ಬೇರೆ ಮಾಧುರ್ಯ. ಮಾವಿನ ಹಣ್ಣನ್ನು ಕಾಣದವನಿಗೆ ಸೇಬಿನ ಹಣ್ಣನ್ನು ಕೊಟ್ಟು ಮಾವಿನ ಹಣ್ಣಿನ ಪರಿಚಯವನ್ನು ಮಾಡಿ ಕೊಡಲಾಗುವುದೆ ? ಅದು ನನ್ನ ಕೈಲಂತೂ ಆಗದ ಕೆಲಸ. ನೀವು ಅವಳನ್ನು ವರ್ಣಿಸುವುದರಲ್ಲಿ ನನಗಿರುವ ಕಷ್ಟವನ್ನು ಗ್ರಹಿಸಬಲ್ಲವರಾದರೆ, ಆಕೆಯ ಸೌಂದರ್ಯವನ್ನೂ ಗ್ರಹಿಸಬಲ್ಲಿರಿ.

ಅವಳನ್ನು ಇಷ್ಟು ದಿನಗಳಿಂದ ನೋಡಿ ನೋಡಿ, ಈಗ ನೆನೆಸಿಕೊಂಡ ಮಾತ್ರಕ್ಕೆ ನನ್ನ ಚಿತ್ತದಲ್ಲಿ ಸ್ಫೂರ್ತಿಸುವುದು ಆಕೆಯ ಮುಖ ಮಾತ್ರ ; ಇನ್ನು ಉಳಿದುದೆಲ್ಲಾ ಕತ್ತಲು. ಆ ಕತ್ತಲಿನಲ್ಲಿ ಆ ಮುಖ ಸೌಮ್ಯ ಪ್ರಭೆಯ ಪುಟ್ಟದೊಂದು ಜ್ವಾಲೆಯಂತೆ ತೋರುತ್ತದೆ. ಕೂಡಲೆ ನಾನು

(ನನ್ನ ಹೃದಯ—ಮನಸ್ಸು—ಏನು ಬೇಕಾದರೂ ತಿಳಿದುಕೊಳ್ಳಿ !) ಒಂದು ಪತಂಗದಂತೆ ಆಗುತ್ತೇನೆ. ಆ ರೂಪವತಿಯ ಮುಖದ ಸೊಬಗಿನ ಅನುಭವವು ಪೂರ್ಣವಾಗಿ ನಿಮಗೆ ಆಗಬೇಕಾದರೆ ನೀವೂ ನನ್ನ ಹಾಗೆಯೇ ಪತಂಗವಾಗಬೇಕು. ಅದು ಸಾಧ್ಯವೋ ? . . . ಇಲ್ಲವೋ ? . . . ಬಿಡಿ. ನನ್ನ ಈ ಮಾತುಗಳನ್ನು ಕೇಳಿ ನೀವು "ಇದೇನು ಹುಚ್ಚು ! ಇವನಿಗೆ !" ಎಂದು ಯೋಚಿಸಬಹುದು. ಯೋಚಿಸಿ. ಪರವಾ ಇಲ್ಲ. ಅದರಿಂದ ನನ್ನ ಮನಸ್ಸು ಸ್ವಲ್ಪವೂ ನೋಯುವುದಿಲ್ಲ. ಧೈರ್ಯವಾಗಿರಿ. ಏಕೆಂದರೆ ನಿಮ್ಮ ಯೋಚನೆ ತಪ್ಪಲ್ಲ. ಇರೋ ಸಂಗತಿ ಹೇಳಿಬಿಡುತ್ತೇನೆ; ನನಗೆ ಅವಳ ಮುಖ ಎಂದರೆ ಸ್ವಲ್ಪ (ಸ್ವ-ಲ್ಪ-ವೇ-ನು ! ಚೆನ್ನಾಗಿಯೂ !) ಹುಚ್ಚೇ ಸರಿ. ಈ ಹುಚ್ಚು ಇದುವರೆಗೂ ನಾನು ಬಾ ಅಂದಾಗ ಒಂದು, ಹೋಗು ಅಂದಾಗ ಹೋಗುತ್ತಾ ಒಂದು ತರದಲ್ಲಿ ವಿಧೇಯವಾಗಿದೆ. ಆದರೆ ಎಂದು ಅವಿಧೇಯತನಕ್ಕೆ ಬಿದ್ದು ನನ್ನ ಮರ್ಯಾದೆ ಕಳೆಯುತ್ತೋ ಹೇಳಲಾರೆ. ದೇವರು ಆ ದಿನವನ್ನು ದೂರ ಇಟ್ಟಿರಲಿ. ಒಂದು ವೇಳೆ ಆ ದಿನ ಬಂದರೂ ನನ್ನ ಮರ್ಯಾದೇನಾದರೂ ಭದ್ರಮಾಡಲಿ.

ನನ್ನ ಹುಚ್ಚಿಗೆ ಮುಖ್ಯವಾದ ಕಾರಣ ಆಕೆಯ ಮುಖದ ಮೇಲೆ ಶಾಶ್ವತವಾಗಿ ನೆಲೆಸಿದ್ದ ಆ ಮೆಲುನಗೆ! ಅದನ್ನು ಹೇಗೆ ವರ್ಣಿಸಲಿ? ಇಲ್ಲಿಯೂ ಅದೇ ಗೋಳು ! ವರ್ಣಿಸುವುದಕ್ಕೆ ಪ್ರಯತ್ನಿಸಿದರೆ ಹುಚ್ಚು ಹೆಚ್ಚುವುದೇ ಹೊರತು ಪ್ರಯತ್ನವು ಸಫಲವಾಗುವಂತೆ ತೋರುವುದಿಲ್ಲ. ಈ ಇಪ್ಪತ್ತು ದಿನಗಳಿಂದ ಆ ಮುಖ, ಆ ಮುಖದಲ್ಲಿ ಆ-ಆ-ಆ ಎಂಥಾ ಮೆಲುನಗೆಯೆಂದು ಹೇಳಲಿ ?—ಆ ಮೆಲುನಗೆಯನ್ನು ಮೇಲಿಂದ ಮೇಲೆ ನೋಡಿದ್ದರೂ ಅದನ್ನು ವರ್ಣಿಸುವುದಕ್ಕೆ ಒಂದು ಮಾತೂ ಇಲ್ಲವಾಗಿದೆ ! ಮಧುವನ್ನು ಸವಿದ ಮೂಕನಂತಾಗಿದ್ದೇನೆ ! ಆಹಾ ! ಆ ಮುಗುಳ್ನಗೆ ! ಅಯ್ಯಾ, ಮಧುಮಾಸದಲ್ಲಿ ನೀವು ವನಗಳಲ್ಲಿ ಅಡ್ಡಾಡಿಲ್ಲವೆ ? ("ಇಲ್ಲ" ಎಂದರೆ ನನ್ನ ಮುಂದಿನ ಮಾತುಗಳು ಕಿನ್ನರಿ ಬಾರಿಸಿದ ಹಾಗೆಯೇ ಸರಿ. "ಹು" ಎಂದರೆ) ಅಲ್ಲಿ ನಿಮಗೆ ಪರಿಚಯವಿಲ್ಲದ ಪರಿಮಳವೊಂದು ಗಾಳಿಯಲ್ಲಿ ಬೆರೆತು ಬರತೊಡಗಲು ನೀವು ನಿಮ್ಮ ಹೆಜ್ಜೆಗಳನ್ನು ನಿದಾನಿಸಿ—ನಿಂತು—ಸುತ್ತಮುತ್ತ ನೋಡಿಲ್ಲವೆ ? ಹಾಗೆ ನೋಡುವಾಗ ಒಂದು ದಿಕ್ಕಿನಲ್ಲಿ ಜಾಡು ಹಿಡಿದು ಅಲ್ಲಿ ಇಲ್ಲಿ ನುಳಿದು ಹೋಗಿ, ಒಂದೆಡೆಯಲ್ಲಿ ಆ ಅಪರಿಚಿತ

ವಾದ ಪರಿಮಳಕ್ಕೆ ನೆಲೆಯಾದ ಹೂವಿನ ಗಿಡವನ್ನೋ ಮರವನ್ನೋ ಬಳ್ಳಿಯನ್ನೋ ನೋಡಿ ಆನಂದಪಟ್ಟಿಲ್ಲವೆ? ನೋಡಿ, ಆ ಪರಿಮಳವು ಹೇಗೆ ನಿಮ್ಮ ಮೂಗನ್ನು ಹಿಡಿದು ಎಳೆದೊಯ್ಯುತ್ತೋ ಹಾಗೆಯೇ ಅವಳ ಮುಗುಳ್ನಗೆಯು ಈ ಇಪ್ಪತ್ತು ದಿನಗಳಿಂದಲೂ ನನ್ನ ಕಣ್ಮನವನ್ನು ಸೆಳೆದಿದೆ. ಈ ಉಪಮಾನದಿಂದ ನನಗೂ ಆಕೆಯ ಮುಗುಳ್ನಗೆಗೂ ಇದ್ದ ಸಂಬಂಧವನ್ನು ವ್ಯಕ್ತಪಡಿಸಿದಂತಾಯಿತೇ ಹೊರತು ಮುಗುಳ್ನಗೆಯನ್ನು ವರ್ಣಿಸಿದಂತಾಗಲಿಲ್ಲ. ಸೋಲನ್ನು ಒಪ್ಪಿಕೊಂಡುಬಿಡುತ್ತೇನೆ—ನಾನು ವರ್ಣಿಸಲಾರೆ. ನನ್ನ ಸ್ನೇಹಿತರು ಕೆಲವರು ನನ್ನ ವರ್ಣನಾಶಕ್ತಿಗೆ ಮೆಚ್ಚಿ ತಮ್ಮ ತಲೆ ತೂಗಿ ನನ್ನ ತಲೆ ತಿರುಗುವ ಹಾಗೆ ಮಾಡಿಬಿಟ್ಟಿದ್ದರು. ಆ ತಿರುಗುವ ತಲೆಯನ್ನು ನಿಲ್ಲಿಸುವುದಕ್ಕಾಗಿ ಇವಳು ನನ್ನ ಕಣ್ಣಿಗೆ ಬಿದ್ದಳೋ ಏನೋ ಎಂದು ಒಂದೊಂದು ಸಲ ಅನ್ನಿಸುತ್ತದೆ. ಅಂದಿನಿಂದ ಇದುವರೆಗೆ ಎಷ್ಟೋ ಬಾರಿ ಮನದಲ್ಲೇ "ಕುಸುಮವೇ, ನಿನ್ನನ್ನು ನಾನು ವರ್ಣಿಸಲಾರೆ!" ಎಂದು ತಲೆಬಾಗಿ ಹೇಳಿದ್ದೇನೆ. ಇನ್ನು ಆ ಕಣ್ಣುಗಳು! "ಓಹೋ! ತುಟಿಯಾಯಿತು—ಇನ್ನು ಕಣ್ಣಿಗೆ ಹೋದನೋ!" ಎಂದು ದೋರಣೆಮಾಡಿ, ನನ್ನನ್ನು ನೂಕಬೇಡಿ. ದೇವರು ನಿಮಗೆ ಕೊಟ್ಟಿರುವ ಕಣ್ಣುಗಳು ಸಾರ್ಥಕವಾಗಬೇಕಾದರೆ ನೀವು ಅವಳ ಕಣ್ಣುಗಳನ್ನೊಮ್ಮೆ ನೋಡಬೇಕು. "ಏನು, ಮಲ್ಲಿಗೆಯರಳಲ್ಲಿ ನೆರೆಯಾದ ಮರಿದುಂಬಿಯಂತಿತ್ತೋ?" ಎಂದು ಹಾಸ್ಯಮಾಡುವಿರಾ? ಅಥವಾ "ಏಣಾಕ್ಷಿಯೋ?—ಉತ್ಪಲಾಕ್ಷಿಯೋ? ಪದ್ಮನಯನೆಯೋ? ಪ್ರಫುಲ್ಲನಯನೆಯೋ?" ಎಂದು ಕೇಳುವಿರಾ? ನಾನೇನು ಅವುಗಳನ್ನು ಯೋಚಿಸದೆ ಇಲ್ಲ. ಈ ಇಪ್ಪತ್ತು ದಿನಗಳಿಂದ ಸುಮ್ಮನೆ ಇದ್ದೆನೆಂದು ತಿಳಿದುಕೊಂಡಿರಾ? ಯೋಚಿಸಿದ್ದೇನೆ—ಚರ್ಚೆಮಾಡಿದ್ದೇನೆ—ಚಿಂತಿಸಿದ್ದೇನೆ. ಅವುಗಳಲ್ಲಿ ಯಾವ ಒಂದು ಹೆಸರೂ ಅವಳ ಕಣ್ಣುಗಳನ್ನು ಪೂರ್ಣವಾಗಿ ವರ್ಣಿಸಲಾರದು. ಆ ಹೆಸರುಗಳನ್ನೆಲ್ಲಾ ಸಮನಾದ ಹದದಲ್ಲಿ ಬೆರೆಸಿ ಒಂದು ಸಮಾಸವನ್ನು ಮಾಡಬಲ್ಲಿರಾ? ನೋಡಿ, ಪ್ರಯತ್ನಮಾಡಿ; "ಮರಳಿಯತ್ನವಮಾಡಿ."

ನಮ್ಮ ದೃಷ್ಟಿಯು ಪರಸ್ಪರ ಸಂಧಿಸಿದಾಗಲೆಲ್ಲಾ ನಾನು ದೊಡ್ಡದೊಂದು ಸೂಜಿಗಲ್ಲಿನ ನೆರೆಯಲ್ಲಿರುವ ಕಬ್ಬಿಣದ ಸಣ್ಣದೊಂದು ಅದುರಿನಂತಾಗಿದ್ದೇನೆ. ಆ ಒಂದು ಕ್ಷಣದಲ್ಲಿ ನನ್ನ ಸ್ಥೂಲಕಾಯವು ಕರಗಿ—

ಆರಿಹೋಗಿ, ನನ್ನ ಕಣ್ಣುಗಳು ಮಾತ್ರ ಯಾವುದೋ ಮಾಯೆಯಲ್ಲಿ ಉಳಿದುಕೊಂಡಂತಾಗಿದೆ. ಬರಬರುತ್ತ ಆ ಕಣ್ಣ ಕಾಂತಿಯಲ್ಲಿ "ನಾನು" ಎಂಬ ಜ್ಞಾನವೂ ಮಸಕಾಗಿ ಮಾಯವಾಗಿ ಹೋಗಿದೆ.

ಈ ಇಪ್ಪತ್ತು ದಿನಗಳಲ್ಲಿ ಅನೇಕ ಸಲ "ನಾನು ಚಿತ್ರಗಾರನಾಗಿದ್ದಿದ್ದರೆ!" ಎಂದು ಅನ್ನಿಸಿದೆ; ಮರುಕ್ಷಣದಲ್ಲೇ "ಅಲ್ಲವೇ?—ನಾನು ಚಿತ್ರಗಾರನಲ್ಲವೆ?" ಎಂದೂ ತೋರಿದೆ. ನನ್ನ ಕಡೆಯ ದಿನದವರೆಗೂ ನನ್ನ ಚಿತ್ತದಲ್ಲಿ ಊರಿ ನೆಲೆಸುವುದು ಅವಳ ಆ ಮುಖ—ಅದರಲ್ಲಿ ಆ ಮೆಲುನಗೆ—ಆ ಕಣ್ಣುಗಳು. ನೆನೆಸಿದ ಕ್ಷಣದಲ್ಲಿ ಆ ಮುಖದ ಒಂದೊಂದು ಅಂಶವನ್ನೂ—ಒಂದೊಂದು ರೇಖೆಯನ್ನೂ ನನ್ನ ಚಿತ್ತಭಿತ್ತಿಯಲ್ಲಿ ಚಿತ್ರಿಸಿಕೊಳ್ಳಬಲ್ಲೆ. ನಾನು ಚಿತ್ರಗಾರನಲ್ಲವೆ? ಬಣ್ಣಗಳಿಂದ ಕಾಗದದ ಮೇಲೆ ಅವಳನ್ನು ಚಿತ್ರಿಸಲಾರೆನೆಂದು ಕಷ್ಟವೋ. ಆದರೇನು? ನನ್ನ ಮನವು ತಾಳಲಾರದ ಬಣ್ಣ—ಅದು ಎಳೆಯಲಾರದ ರೇಖೆ ಯಾವುದಿದೆ? . . . ನಿಮಗೆ ಬೇಸರವೇನೋ? ಆಕಳಿಸುತ್ತಾ ಇದ್ದೀರಿ!

ನಿನ್ನೆಗೆ ಇಪ್ಪತ್ತು ದಿನಗಳಾಗಿ ಹೋದವು; ಇಂದು ಇಪ್ಪತ್ತೊಂದನೆಯ ದಿನ. ಈ ದಿನವೂ ಅವಳನ್ನು ನೋಡಿದೆ. ಇದುವರೆಗೂ ಸುಮ್ಮನೆ ನೋಡುವುದು ಮಾತ್ರ ಆಗಿದೆ. ಏನಾದರೂ ಮಾಡಿ ಅವಳೊಡನೆ ಮಾತನಾಡಬೇಕು—ಅವಳ ದನಿಯನ್ನು ಆಲಿಸಬೇಕು—ಎಂಬ ಬಲವತ್ತರವಾದ ಆಸೆಯೊಂದು, ಅಡಿಗಡಿಗೆ ನನ್ನ ಹೃದಯದಲ್ಲಿ ಮಹಾಸಾಗರದ ಅಲೆಯಂತೆ ಎದ್ದು ನನ್ನ ಮನವನ್ನು ಮೇಲಿಂದ ಮೇಲೆ ಅಪ್ಪಳಿಸಿದೆ. ಆದರೆ ನನ್ನ ಆಸೆಯು ಪೂರ್ಣವಾಗುವ ಬಗೆ? . . . ಏನು ಉಪಾಯ? ಮಾತನಾಡಲು ನಾನು ಸಿದ್ಧನಾಗಿದ್ದೇನೆ; ಆದರೆ . . . ಅವಳು? . . . . ಇಲ್ಲ! ಅವಳು ಮಾತನಾಡುವಳೆ? ಸಾಧ್ಯವೇ ಇಲ್ಲ! ನಾನು ಹುಚ್ಚ—ಉನ್ಮತ್ತ! ನನ್ನೊಡನೆ ಅವಳು ಹೇಗೆ ಮಾತನಾಡಬಲ್ಲಳು? ಇಪ್ಪತ್ತು ದಿನಗಳಿಂದ ನನ್ನ ಕಣ್ಣುಗಳಲ್ಲಿ ಹದ್ದುಮೀರಲಿರುವ ಉನ್ಮಾದವನ್ನು ಅವಳು ಕಾಣದಿರುವಳೆ? ಅಸಂಭವ! ಹೀಗಿರುವಲ್ಲಿ ಅವಳು ಮಾತನಾಡುವುದೆಂತು? ಆದರೂ ಅವಳೊಡನೆ ಇಷ್ಟು ದಿನಗಳೂ ಒಂದು ರೀತಿಯಲ್ಲಿ ಮಾತನಾಡಿಯೇ ಇದ್ದೇನೆ—ಕಣ್ಣುಗಳಿಂದ ನೀರವವಾಗಿ ಮಾತನಾಡಿದ್ದೇನೆ. ನನ್ನ ದನಿಯಿಲ್ಲದ ಮಾತುಗಳನ್ನು ಅವಳು ಕೇಳಿರುವಳೆ? ಆಸೆಯ ಭಾರದಿಂದ ಬಳುಕುವ ನನ್ನ ದೃಷ್ಟಿ ಅವಳ ಹೃದಯವನ್ನು ಸೋಂ

ಕಿರುವುದೆ ? ನಾನು ಅವಳ ಮೊಗದ ಕಾಂತಿಗೆ ಮರುಳಾದ ಪತಂಗ ಎಂದು ಅರಿತಿರುವಳೆ ? ಅವಳ ಮುಖವು ಶೀತಳವಾದ ಜ್ವಾಲೆಯಂತೆ ಎಂದರೆ ನೀವು ನಗುವಿರಿ; "ಇದೇನು 'ಬಿಸಿಬಿಸಿ ಮಂಜುಗಡ್ಡೆ!' ಅನ್ನುವಿರಿ. ನನ್ನ ಮೆದುಳಿನ ಯಾವುದೋ ಭಾಗದಲ್ಲಿ ಏನೋ ಒಂದು ಸಡಿಲವಾಗಿದೆ—ಎಂದು ಹಾಸ್ಯ ಮಾಡುವಿರಿ. ಶೀ-ತ-ಳ-ವಾ-ದ-ಜ್ವಾ-ಲೆ! ಹೌದು! ಏಕಾಗಬಾರದು! ತಾಳಿ, ಅದರ ಅನುಭವವನ್ನು ಈ ಕ್ಷಣದಲ್ಲಿ ನಿಮಗೆ ಮಾಡಿಕೊಡುತ್ತೇನೆ. ನಾನು ಹೇಳಿದ ಹಾಗೆ ಕೇಳಬೇಕು, ಅಷ್ಟೆ. ಎಲ್ಲಿ ಕಣ್ಣು ಮುಚ್ಚಿಕೊಳ್ಳಿ; ಆಯಿತೋ? . . . . ಈಗ ನಿಮ್ಮ ಮನಸ್ಸನ್ನು ನನ್ನ ವಶಕ್ಕೆ ಕೊಡಿ; ಹುಚ್ಚ—ಎಂದು ಹೆದರಬೇಡಿ. . . ಅದೋ ನೋಡಿ—ಕಣ್ಣು ತೆರೆಯಬೇಡಿ !—ಹಾಗೇ ನೋಡಿ !—ನೋಡಿ ! ಕಗ್ಗತ್ತಲ ಮಧ್ಯದಲ್ಲಿ ಹುಟ್ಟಿದೊಂದು ಜ್ವಾಲೆ ಕಾಣುವದಿಲ್ಲವೆ ? . . ಎಷ್ಟು ಪ್ರಕಾಶ ! . . ಹೇಗೆ ನಗುತ್ತಿದೆ ! ಹೇಗೆ ಬಳುಕುತ್ತಿದೆ ! . . ಅದೇನು ನಲಿದಾಟ !! ನೋಡಿ, ಚೆನ್ನಾಗಿ ನೋಡಿ . . ಈಗ ಬನ್ನಿ ಅದರ ಹತ್ತಿರ, ಬನ್ನಿ . . ಹೆದರಬೇಡಿ ! . . ಎಲ್ಲಿ, ನಿಮ್ಮ ಕೈಕೊಡಿ . . ಏನು ಭಯ!! ಇಲ್ಲ, . . ಸುಡುವುದಿಲ್ಲ ! . . ತಂಪು! ತುಷಾರದಂತೆ ತಂಪಾಗಿದೆ! ನಂಬುವುದಿಲ್ಲವೆ? ಇದೋ . . ನೋಡಿ ನಾನು ಬೆರಳನ್ನಿಡುತ್ತೇನೆ ! ನೋಡಿ !—ನೋಡಿ ! ಜ್ವಾಲೆ ಹೇಗೆ ಆಡುತ್ತಿದೆ!—ಹೇಗೆ ಬಳುಕುತ್ತಿದೆ !—ನನ್ನ ಬೆರಳಿನ ಮೇಲೆ ! . . ಎಲ್ಲಿ, ಈಗಲಾಲಾದರೂ ಇಡಿ ನಿಮ್ಮ ಬೆರಳನ್ನು . . ಹ! ಹಾ! ನೋಡಿದಿರಾ! . . ತಂಪಾಗಿಲ್ಲವೆ ? ಜ್ವಾಲೆ ಶೀತಳವಾಗಿಲ್ಲವೆ ? ಹೇಳಿ, ಈಗಲಾದರೂ—ನನ್ನ ಮಾತು ನಿಜವೋ ಸುಳ್ಳೋ ? ನಂಬಿಕೆಯಾಯಿತೆ? ಹುಂ ! ಸರಿ, ಇನ್ನು ನಿಮ್ಮ ಮನಸ್ಸನ್ನು ವಾಪಸು ತೆಗೆದುಕೊಳ್ಳಿ ; ನನ್ನ ಜವಾಬುದಾರಿ ಮುಗಿಯಿತು. ಕಣ್ಣು ಬಿಡಿ . . ಇದೇನು ? ಎದ್ದು ಬಿಟ್ಟಿರಿ? ನೀವು ಯೋಚಿಸುತ್ತಿರಬಹುದು "ಈ ಹುಚ್ಚನ ಮಾತುಗಳನ್ನು ಕೇಳುತ್ತಿದ್ದರೆ ಇವನ ಜಾಡ್ಯ ನಮಗೂ ಅಂಟುವುದೋ ಏನೋ!" ಎಂದು. ಆ ಭಯ ಬೇಡ. ನನ್ನ ಹುಚ್ಚು ಸಾಂಕ್ರಾಮಿಕ ಜಾಡ್ಯವಲ್ಲ; ಕುಳಿತುಕೊಳ್ಳಿ . . ಹುಂ, ಏನು ಹೇಳುತ್ತಿದ್ದೆ ? . . . ನೆನಪಾಯಿತು; ಅವಳೊಡನೆ ಮಾತು. ಹೌದು, ಏನಾದರೂ ಮಾಡಿ ಅವಳೊಡನೆ ಮಾತನಾಡಿಯೇ ಬಿಡಬೇಕೆಂದು ನಿರ್ಧರಿಸಿದೆ. ಅವಳು ಆಡದಿದ್ದರೆ ಏನಾಯ್ತು ? . . ಒಳ್ಳೆಯದು . . ಏನೆಂದು ಮಾತನಾಡಿಸಲಿ? . .

ಹೆಸರು—ಊರು—ಆಮೇಲೆ? ಆಮೇಲೆ ಏನೋ! ಮಾತು ಪ್ರಾರಂಭವಾದರೆ ಆಮೇಲೆ ಹೇಗಾದರೂ ಮುಂದೆ ಸಾಗುತ್ತೆ.

*　　*　　*　　*

ಇಪ್ಪತ್ತೆರಡನೆಯ ದಿನ. ಇಂದು ಮಾತನಾಡಿಸಿಯೇ ಬಿಡುವುದೆಂದು ಬಹಳ ಗಟ್ಟಿಮನಸ್ಸು ಮಾಡಿಕೊಂಡಿದ್ದೆ. ಆದರೆ ಅವಳನ್ನು ನೋಡಿದಾಗ ನನ್ನ ನಾಲಗೆ ಹಿಮ್ಮೆಟ್ಟಿತು ; ನನ್ನ ಕಣ್ಣುಗಳಿಗೆ " ಅಯ್ಯಾ, ಮಿತ್ರನೇ, ಇಂದೂ ನೀನೇ ಮಾಡಿಬಿಡು ನನ್ನ ಕೆಲಸವನ್ನ—ಏಕೋ ಮೈಯಲ್ಲಿ ಚೆನ್ನಾಗಿಲ್ಲ " ಎಂದು ಅಂಗಲಾಚಿತು. ನನ್ನ ನಾಲಗೆ ನನಗೇ ಹೀಗೆ ಮೋಸಮಾಡುವುದೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಮೋಸವಾಯಿತಲ್ಲಾ !—ಎಂದು ಏನೋ ಮಂಕು ಮುಚ್ಚಿದವನಂತೆ ಹಾಗೇ ಕುಳಿತಿದ್ದೆ. ಪೋಸ್ಟ್‌ಮ್ಯಾನ್ ಒಂದು ಒಂದು ಕಾಗದ—ಕವರು—ಕೊಟ್ಟುಹೋದ. ನೋಡಿದೆ, ನನ್ನದೇ ಕಾಗದ! ಎದೆಯಲ್ಲಿ ಏನೋ ಒಂದು ಮಾದರಿ—ಅಲ್ಲ ತರ—ಊಹು-ಅದೇನೋ ಒಂದು ನಮೂನೆ ಆಯಿತು. ಅದೇನು—ಅನ್ನುವುದನ್ನು ನೀವು ತಿಳಿದುಕೊಳ್ಳಲಾರಿರಾ? ಸಮಯ ಸಿಕ್ಕಾಗ ಹೀಗೆ ಮಾಡಿ; ನೀವು ತಿಂಗಳುಗಟ್ಟಲೆ ಬೇರೆ ಊರಲ್ಲಿರಬೇಕಾದರೆ, ನಿಮ್ಮ ಕೈಹಿಡಿದಾಕೆ ಅಥವಾ ನೀವು ಯಾರ ಕೈಹಿಡಿದಿರೋ ಆಕೆ ದಿನ ಬಿಟ್ಟು ದಿನ ಬರೆಯುವ ಎಂಟು ಪುಟಗಳ ಕಾಗದಕ್ಕೆ ನೀವು ಇಪ್ಪತ್ತು ದಿನಗಳಿಗೋ ತಿಂಗಳಿಗೋ ಒಂದು ಅರ್ಧ ಪುಟ ಗೀಚಿಹಾಕಿ. ಆ ಮೇಲೆ ಅವರು ಒಂದು ಕಾಗದ ಬರೆಯುತ್ತಾರೆ. ಆ ಕಾಗದವನ್ನು ನೋಡಿ—ಓದಿ ; ಆಗ ನಿಮಗೆ ನಾನು " ಎದೇಲಿ ಒಂದು ನಮೂನೆ—ಇತ್ಯಾದಿ " ಎಂದು ಹೇಳಿದೆನಲ್ಲಾ ಅದರ ಪರಿಚಯವಾಗುತ್ತೆ!

*　　*　　*　　*

ನನಗೆ ಏನು ಉತ್ತರ ಬರೆಯಲಿ? ಎಂದು ಯೋಚಿಸ ತೊಡಗಿದೆ. ಈ ಇಪ್ಪತ್ತು ದಿನಗಳಲ್ಲಿ ಅವಳಿಂದ ಐದು, ಅಲ್ಲ—ಆರು ಕಾಗದಗಳು ಬಂದಿದ್ದವು. ಇದು ಏಳನೆಯದು ; ಬಲು ಜೋರಾಗಿದೆ! ಮೆಣಸಿನ ಪುಡಿ ಹೆಚ್ಚು !! ನಾನಾದರೋ ಒಂದೇ ಒಂದು ಸಣ್ಣ—ಸಾಧಾರಣವಾದ ಸಪ್ಪೆ ಕಾಗದ ಬರೆದಿದ್ದೆ. ಇವತ್ತು ಬಂದ ಈ ಕಾಗದಕ್ಕೆ ಏನು ಉತ್ತರ ಕೊಡುವುದೋ ತೋರದಾಗಿದೆ . . ಯಾವ ಕಾರಣ ಜೋಡಿಸಲಿ? . . ಏನು ನೆವ ಹೊಂದಿಸಲಿ? ಬಲು ಕಿಡಿಕಿಡಿಯಾಗಿದ್ದಾಳೆ! ಅವಳ ಕೋಪವನ್ನು ಹೇಗೆ

ಹತ್ತೋಟಿಗೆ ತರಲಿ ? ಕುಂಟು ನೆವ ಹೇಳಲೆ ? ಅಥವಾ ನಿಜವಾದ ಕಾರಣ ವನ್ನು ಬರೆದು ಬಿಡಲೆ ? ನಿ-ಜ-ವಾ-ದ ಕಾ-ರ-ಣ ! ಏ-ನಾ-ಗು-ತ್ತೆ ! ಏ-ನಾ-ಗು-ತ್ತೆ! ಸುಂಟರಗಾಳಿಗೆ ಔತನ ಕೊಟ್ಟ ಹಾಗಾಗುತ್ತೆ ! ಕೈಹಿಡಿದವಳ ಕಾಲು ಹಿಡಿಯಬೇಕಾಗುತ್ತೆ !! ಖಂಡಿತ ! ನಿಜವಾದ ಕಾರಣ ನನ್ನ ಹುಚ್ಚು ! ಈ ಹುಚ್ಚನ್ನು ಅವಳು—ನನ್ನ ಸರು—ತಿಳಿದುಕೊಳ್ಳಬಲ್ಲಳೇ ? ಹೆಂಗುಸರು ಕೆಲವು ಕಷ್ಟವಾದ ವಿಷಯಗಳನ್ನು ಲೀಲಾಜಾಲವಾಗಿ ತಿಳಿದು ಕೊಂಡುಬಿಡುತ್ತಾರೆ ; ಕೆಲವು ಅತಿ ಸರಳವಾದ ವಿಷಯಗಳನ್ನು ಸ್ವಲ್ಪವೂ ತಿಳಿದುಕೊಳ್ಳಲಾರರು. ನನ್ನ ಹುಚ್ಚು ಈ ಎರಡನೆಯ ಜಾತಿಗೆ ಸೇರಿ ದುದು. ಸರು ಖಂಡಿತ ತಿಳಿದುಕೊಳ್ಳಲಾರಳು ; ತಿಳಿದುಕೊಳ್ಳುವ ಪ್ರಯತ್ನ ವನ್ನೂ ಮಾಡುವುದಿಲ್ಲ. ಅವಳು ನನ್ನ ಈ ಹುಚ್ಚು ಕೆಲಸವನ್ನು ಎಂದಿಗೂ ಒಪ್ಪುವುದಿಲ್ಲ ? ಒಪ್ಪುವುದು ಹಾಗಿರಲಿ, ಸಹಿಸುವುದಿಲ್ಲ. "ನಿನಗೆ ಒಪ್ಪಿಗೆಯೆ ? ನಿನ್ನ ಈ ಹುಚ್ಚು ಕೆಲಸ ?" ಎಂದು ಕೇಳುವಿರೇನೋ ! ಹೇಗೆ ಹೇಳಲಿ—ಅದು ಸರಿಯೋ ತಪ್ಪೋ—ಎಂದು ? ಒಂದು ಸಲ ತಪ್ಪು ಎಂದು ತೋರಿದರೆ ನೂರು ಸಲ ಸರಿ ಎಂದು ತೋರುವುದು. ಅವಳನ್ನು ಪಡೆಯಬೇಕು—ನನ್ನವಳನ್ನಾಗಿ ಮಾಡಿಕೊಳ್ಳಬೇಕು—ಎಂಬ ಆಸೆಗಳಾವುವೂ ಜ್ಞಾನಾವಸ್ಥೆಯಲ್ಲಿ ನನಗೆ ತಿಳಿದ ಮಟ್ಟಿಗೆ ತೋರಿಲ್ಲ. ಇರುವ ಆಸೆಯೆಲ್ಲಾ ನನ್ನ ಕಣ್ಣುಗಳದು—ಎಂದು ತಿಳಿದುಕೊಂಡಿದ್ದೇನೆ. ಸುಮ್ಮನೆ ನೋಡಬೇಕು—ಎಂದು, ಅಷ್ಟೆ. ಇದು ತಪ್ಪೆ ? ತಪ್ಪು ಎಂದು ಮನಸ್ಸನ್ನು ತಿದ್ದಿದರೆ ತಪ್ಪಾಗಿ ಕಾಣುತ್ತದೆ ; ಸರಿ—ಎಂದು ತಿದ್ದಿದರೆ ಸರಿಯಾಗಿ ಕಾಣುತ್ತದೆ. ನನ್ನಲ್ಲಿ ಇದುವರೆಗೂ ಹೆಚ್ಚಾಗಿ ಆಗಿರುವ ಪ್ರಯತ್ನ "ಸರಿ" ಎಂದು ತಿದ್ದುವುದಕ್ಕೆ. ಇದಕ್ಕೆ ಕಾರಣ ಮಿದುಳೋ, ಹೃದಯವೋ, ಪಿತ್ತಕೋಶವೋ, ಗುಲ್ಮವೋ ನಾನು ನಿರ್ಧರಿಸಲಾರೆ. ತನ್ನದಲ್ಲದ ತನಗೆ ಸಿಲುಕದ ಒಂದು ವಸ್ತುವಿನಲ್ಲಿ ಅನುರಾಗವನ್ನು ತೋರುವುದೂ, ಅದನ್ನು ಆಶಿಸುವುದೂ ನೀತಿಗೆ ವಿರುದ್ಧ. ಈ ಮಾತನ್ನು ಒಪ್ಪುವರು ಎಷ್ಟು ಜನ—ಒಪ್ಪದವರು ಎಷ್ಟು ಜನ? ಎರಡು ಪಂಗಡದಲ್ಲಿಯೂ ಅನೇಕರಿರಬಹುದು—ಇದ್ದಾರೆ. ಈ ನೀತಿ ಅನ್ನುವುದು ದೇಹವನ್ನು ಆಳಬಲ್ಲುದು ; ನಾಲಗೆಯನ್ನು ಹಿಡಿತದಲ್ಲಿಡಬಲ್ಲುದು ; ಆದರೆ ಮನಸ್ಸನ್ನ ? ಕಷ್ಟ ! ಅತಿಕಷ್ಟ ! ಅದರ ಎದುರಿನಲ್ಲಿ ನೀತಿಯು ನುಚ್ಚುನುರಿಯಾಗುವ ಸಂಭವವೇ ಹೆಚ್ಚು. ಬೆಣ್ಣೆಯಂತೆ ಮೃದುವಾಗ ಬಲ್ಲುದು, ಈ ಮನಸ್ಸು—ಕಲ್ಲಿನಂತೆ

ಗಟ್ಟಿಯಾಗಬಲ್ಲುದು ; ಗಾಳಿಯಂತೆ ಹಗುರಾಗಬಲ್ಲುದು—ಬೆಟ್ಟದಂತೆ ಜಡವಾಗಬಲ್ಲುದು ; ಹನಿಯಾಗಬಲ್ಲುದು—ಮಹಾಸಾಗರವಾಗಬಲ್ಲುದು ; ಅಮೃತವಾಗಬಲ್ಲುದು—ಕಾಲಕೂಟವಾಗಬಲ್ಲುದು ! ಇದು ಮನಸ್ಸಿನ ಮಾಯೆ ! ಈ ಮಾಯಾವಿಯೊಡನೆ ಪ್ರೀತಿಗೆ ಮಲ್ಲಯುದ್ಧ ಸಂಭವಿಸಿದರೆ ಗೆಲುವು ಯಾರಿಗೆ—ಸೋಲು ಯಾರಿಗೆ ?

ಆಕೆಯ ವಿಚಾರದಲ್ಲಿ ನನ್ನ ಮನೋವೃತ್ತಿ ನನಗೇ ಗೊತ್ತಿಲ್ಲವಾಗಿದೆ. ನನ್ನದು ಇಂದು ಇದ್ದು ನಾಳೆ ಹೋಗುವ ಬರೀ ಹುಚ್ಚೆ ? ಅಥವಾ ನನ್ನ ಎದೆಯ ಆಳದಲ್ಲಿ ಹುಟ್ಟಿ ಹರಿಯುತ್ತಿರುವ ಅನುರಾಗವೆ ? ನನಗೇ ತಿಳಿಯದು. ಇದು ಉನ್ಮಾದ ಮಾತ್ರ ಎಂದು ಅಡಿಗಡಿಗೆ ತೋರುವುದು. ಅ-ನು-ರ-ಕ್ತ-ನೆ ? . . . . . . ಆಕೆಯಲ್ಲಿ ? ಒಂದು ವೇಳೆ ಇದ್ದರೂ ಆ ಅನುರಾಗದ ಅರಿವು ಇಂದಿನ ವರೆಗೂ ನನಗೆ ತಿಳಿದುಬಂದಿಲ್ಲ. ಇದ್ದರೂ ಇರಬಹುದು—ಇಲ್ಲದೆಯೂ ಇರಬಹುದು. ಆದರೆ ಹುಚ್ಚಿನ ವಿಷಯದಲ್ಲಿ ಮಾತ್ರ ನನಗೆ ಚೆನ್ನಾಗಿ ಮಂದಟ್ಟಾಗಿ ಹೋಗಿದೆ. ಸಾಧಾರಣವಾಗಿ ಹುಚ್ಚರು ತಾವು ಹುಚ್ಚರು—ಎಂದು ಯೋಚಿಸುವುದಿಲ್ಲ ; ಅಥವಾ ಅವರಿಗೆ ಹಾಗೆ ತೋರುವುದಿಲ್ಲ. ಆದರೆ ನನ್ನ ಹುಚ್ಚು ಇದೆಯಲ್ಲಾ ಇದು ಅಸಾಧಾರಣವಾದುದು !—ಇದು ನನ್ನಲ್ಲಿ ನೆಲೆಸಿ, ವ್ಯಾಪಿಸಿ ನನಗೆ ತನ್ನ ಇರವಿನ ಜ್ಞಾನವನ್ನೂ ಉಂಟುಮಾಡಿದೆ ! . . ಈ ಹುಚ್ಚಿನಿಂದ ಯಾವಾಗ ಬಿಡುಗಡೆ ನನಗೆ ? ಯಾವಾಗ ಮುಕ್ತಿ ? ದಾರಿ ಯಾವುದು. . . ಗೊತ್ತು !—ಗೊತ್ತು ! ದಾರಿಯೊಂದೇ ! ಹುಚ್ಚು ಹಿಡಿಸಿದವಳು ಅವಳು ; ಅವಳೇ ಬಿಡಿಸಬೇಕು ! ನನ್ನ ಹುಚ್ಚನ್ನ ದಿನದಿನಕ್ಕೆ ಹೆಚ್ಚಿಸಿದೆ ಆ ಮಾಯಾವಿಯ ಮೌನ ! ಒಂದು ದಿನ—ಒಂದು ಗಳಿಗೆ—ಒಂದು ಕ್ಷಣ, ಅವಳು ನನ್ನೊಡನೆ ಒಂದು ಮಾತನಾಡಿದರೆ ಆ ಒಂದು ಕ್ಷಣದಲ್ಲಿ—ಆ ಒಂದು ಮಾತಿನಿಂದ ಈ ಇಪ್ಪತ್ತು ದಿನಗಳ ಹುಚ್ಚೂ ಕೊಚ್ಚಿ ಹೋಗುತ್ತದೆ ! . . . ದೇವರೇ, ಅವಳು ನನ್ನೊಡನೆ ಮಾತನಾಡುವಂತೆ—ಒಂದೇ ಮಾತು !—ಮಾಡು. ಈ ಹುಚ್ಚು ಕಟ್ಟನ್ನು ಹರಿಯುತ್ತಿದೆ ! ನಾನು ಮಾತನಾಡಿಯೇ ಬಿಡಬೇಕು—ಅವಳೊಡನೆ ! ಇಲ್ಲದಿದ್ದರೆ . . . . . . ಇಲ್ಲದಿದ್ದರೆ ಮಾತೃಭೂಮಿ—ಮಾ-ತೃ-ಭೂ-ಮಿ-ಯೇ-ನು ?—ನನ್ನ ನರು ನನ್ನನ್ನು ಕಳೆದುಕೊಳ್ಳುವುದು ಖಂಡಿತ ! ಖಂಡಿತ ! . . ಇದನ್ನೆಲ್ಲಾ ಹೇಗೆ ಬರೆಯಲಿ ನರೂಗೆ ? ಬರೆದರೂ ಏನು

ಭರವಸೆ ?—ಅವಳು ತಿಳಿದುಕೊಳ್ಳುತ್ತಾಳೆ ಅಂತ ? . . . ಹುಂ ಏನಾದರೂ ಆಗಲಿ, ಬರೆದೇ ಬಿಡುವುದು ಎಂದು ನಿರ್ಧರಿಸಿದೆ. ಆದರೆ ಏನು ಬರೆಯಲಿ? ಹೇಗೆ ಪ್ರಾರಂಭಿಸಲಿ ? . . . . . ಮೊದಲು ಯಾವುದು—ಕೊನೆಯಾವುದು ?—ಈ ಹುಚ್ಚು ಕಥೆಗೆ? ಬಗೆ ಹರಿಯಲಿಲ್ಲ. ಅತಿ ಗಹನವಾದ ವಿಚಾರಗಳಲ್ಲಿ ಬಗೆ ಹರಿಯದಿದ್ದರೆ ನಾನೊಂದು ಹಳೇ ಉಪಾಯವಮಾಡುವ ವಾಡಿಕೆಯುಂಟು. ಏನೆಂದರೆ ಕಣ್ಣುಗಳನ್ನು ಅರ್ಧ ಮುಚ್ಚಿಕೊಳ್ಳುವುದು ; ಆ ಅರೆತೆರೆದ ರೆಪ್ಪೆಗಳ ಮೂಲಕ ಎರಡು ಕಣ್ಣುಗಳಿಂದಲೂ ಸ್ವಂತ ನಾಸಿಕಾಗ್ರವನ್ನು ನೋಡುವುದು. ಆಗ ಏಕಾಗ್ರತೆ ಬರುತ್ತದೆ. ಜ್ಞಾನವು ಅಂತರ್ಮುಖಿಯಾಗುತ್ತದೆ. ವಿಷಯ ಎಷ್ಟೇ ಕಷ್ಟವಾಗಿರಲಿ, ಎಷ್ಟೇ ತೊಡಕಾಗಿರಲಿ, ಕೂಡಲೆ "ಸುಲಿದ ಬಾಳೆಯ ಹಣ್ಣಿನಂದದಿ" ಸರಳವಾಗುತ್ತದೆ. ಬೇಕಾದ ಉತ್ತರ ಮೂಗಿನ ತುದಿಯಲ್ಲೇ ಸಿಕ್ಕುತ್ತೆ. ದೂರ ಹೋಗಬೇಕಾಗುವುದಿಲ್ಲ. ನಾನು ಈ ಉಪಾಯವನ್ನು ನನ್ನ ಮೇಲೆ ನಾನೇ ಪ್ರಯೋಗಮಾಡಿಕೊಂಡೆ. ಬರಬರುತ್ತ ನನ್ನ ಇಂದ್ರಿಯಗಳು ಒಳಮುಖವಾದುವು. "ಮನ್ಮಥವಿಜಯ"ದಲ್ಲಿ ವರದಾಚಾರ್ಯರು ಮಾಡುತ್ತಿದ್ದ, ತಪೋಮಗ್ನನಾದ ಪರಶಿವನ ವರ್ಣನೆಯನ್ನು ಕೇಳಿಲ್ಲವೆ? ನಾನು ಆ ಪರಶಿವನಂತೆ ಆಗಿರಬಹುದು. ನನ್ನ ತಪಸ್ಸಿನ ಬೀಜಾಕ್ಷರಗಳು "ಏನು ಬರೆಯಲಿ ?—ಹೇಗೆ ಬರೆಯಲಿ ? ಹೇಗೆ ಬರೆಯಲಿ ?—ಏನು ಬರೆಯಲಿ ?" ಎಂದು.

* * * *

ಈ ತಪಸ್ಸಿನಲ್ಲಿ ಎಷ್ಟು ಹೊತ್ತು ಕಳೆದೆನೋ ಹೇಳಲಾರೆ. ಸುಮಾರು ಹತ್ತು ನಿಮಿಷಗಳಾಗಿರಬಹುದು. ಇನ್ನೂ ತೊಡಕಿನ ತುದಿಯೇ ಸಿಕ್ಕಿರಲಿಲ್ಲ. ನಾನು ಆ ತೊಡಕಿನ ಅಂತರಾಳದಲ್ಲೇ ಅಲೆದಾಡುತ್ತಿದ್ದೆ. ಆಗ ಹೊರಗೆ ನನ್ನ ತಪಸ್ಸಿಗೆ ಏನೋ ಭಂಗ ಬಂದೊದಗಿದಂತೆ ಅನುಭವವಾಯಿತು. "ಯಾರು ?" ಎಂದೆ ನನ್ನ ಅರ್ಧ ನಿಮೀಲಿತ ನಯನಗಳಿಗೆ. ಅವು,

"ಅವಳು !" ಎಂದವು.

"ಯಾರು ?"

"ಅವಳು ! —ನಿನಗೆ ಹುಚ್ಚು ಹಿ . . ."

"ಹ !"

"ಹೌದು ; ಅವಳೇ ! "

ನಾನು ಹಾರಿಬಿದ್ದೆ ! ತಪಸ್ಸಿಗೆ ತರ್ಪಣ ಕೊಟ್ಟು ಕಣ್ಣುಗಳನ್ನು ತೆರೆದೆ. ಹೌದು ! ಅವಳೇ ! ಅ-ವ-ಳೆ ! ! ಕ್ಷಣಕಾಲ ನನಗೆ ನಂಬುಗೆಯಾಗಲಿಲ್ಲ. ಇದು ಕನಸೆ ? ನಾನು ಕನಸು ಕಾಣುತ್ತಿರುವೆನೆ ? . . . ಏನು ಭ್ರಾಂತಿ ? ಇಲ್ಲ . . ಇಲ್ಲಾ ! ಇದು ಕನಸಾದರೆ . . ನಾನು ಇಪ್ಪತ್ತು ದಿನಗಳಿಂದ ನೋಡುತ್ತಿದ್ದುದೂ . . . ಊಹು! ಇರಲಾರದು. ಇಲ್ಲ! ಎಂದಿಗೂ ಇಲ್ಲ! . . ಇಲ್ಲಿಗೆ! . . ಇಷ್ಟು ಹತ್ತಿರಕ್ಕೆ ಹೇಗೆ ಬಂದಳು? ಇಪ್ಪತ್ತು ದಿನಗಳಿಂದ ಇಲ್ಲದ ಧೈರ್ಯ ! . . ಇಂದು ! . . ಅದು ಹೇಗಾದರೂ ಆಗಲಿ, ಇದು ವರೆಗೂ ಮಾತಿಗೆ ಅವಕಾಶವಿರಲಿಲ್ಲ. ಇಂದು ನನ್ನ ಕೊಠಡಿಯಲ್ಲಿ—ನನ್ನ ಎದುರಿಗೆ—ಕೈ ಚಾಚಿದರೆ ಸಿಕ್ಕುವಹಾಗೆ ನಿಂತಿದ್ದಾಳೆ ! . . "ಈ ಅವಕಾಶ ವನ್ನು ಬಿಡಬಾರದು ! " ಅಂದುಕೊಂಡೆ. ಇಪ್ಪತ್ತು ದಿನಗಳ ಆಸೆಯನ್ನು ಇವತ್ತು ತೀರಿಸಿಕೊಂಡೇ ಬಿಡಬೇಕೆಂದು ನನಗೆ ನಾನೆ ಹುರಿದುಂಬಿದೆ ! . . ಆದರೆ ಎಷ್ಟು ಹತ್ತಿರ ನಿಂತಿದ್ದಳು ! . . ಅವಳ ಸಾಮೀಪ್ಯದಿಂದ ನನ್ನ ಹುರುಪು ಹುಡಿಯಾಯಿತು ! ಏಳುವುದಕ್ಕೆ ಪ್ರಯತ್ನ ಪಟ್ಟೆ ; ಆಗಲಿಲ್ಲ. ಆ ಮಾಯಾವಿಯ ದೃಷ್ಟಿ ನನ್ನನ್ನು ಕುರ್ಚಿಗೆ ಒತ್ತಿ ಹಿಡಿದಿದ್ದಂತೆ ತೋರಿತು. ಮಾತನಾಡಲು ಪ್ರಯತ್ನ ಪಟ್ಟೆ ; ಆಗಲಿಲ್ಲ. ನನ್ನ ನಾಲಿಗೆ ಗರುಡಮಣಿ ಯನ್ನು ಕಂಡ ಸರ್ಪದ ಹೆಡೆಯಂತೆ ಮುದುರಿ ಹೋಗಿತ್ತು ! ಮೊದಲು ಒಂದು ಮಾತನಾಡಿದರೆ ಸಾಕು, ಆ ಮೇಲೆ ಸುಲಭವಾಗುವುದು—ಎಂದು ಬಹಳ ಪ್ರಯತ್ನ ಪಟ್ಟೆ ; ಆದರೆ ಊಹು—ಒಂದು ಮಾತನ್ನೂ ನಾಲಿಗೆ ಆಡಲಾರದೆ ಹೋಯಿತು. ಬಾಯಲ್ಲಿ ಅದು ಇದೆಯೋ ಇಲ್ಲವೋ ಎಂದು ಭ್ರಮಿಸುವ ಹಾಗಾಯಿತು.—"ಹಾವು ಸಾಯಬಾರದು—ಕೋಲು ಮುರಿಯಬಾರದು "—ನಾಲಿಗೆ ಆಡಲೊಲ್ಲದು, ನಾನು ಬಿಡಲೊಲ್ಲೆ. ಕುರು ಕ್ಷೇತ್ರದಲ್ಲಿ ಅರ್ಜುನ ಯುದ್ಧಮಾಡುವುದಿಲ್ಲ ಅಂದಾಗ ಶ್ರೀ ಕೃಷ್ಣ ಚಿತಾವಣೆ ಮಾಡಲಿಲ್ಲವೆ ? ನಾನೂ ಹಾಗೇ ನನ್ನ ನಾಲಿಗೆಗೆ ಚಿತಾವಣೆ ಮಾಡತೊಡಗಿದೆ. ಅದು ಬಲು ಹೊತ್ತಿನ ಮೇಲೆ, ಕೈಕೆಳಗಿನ ನೌಕರರಲ್ಲಿ ಶೋಭಿಸುವ ತಾಬೇದಾರಿಯ ಪುಕ್ಕಲುತನದಿಂದ ಒಂದು ಮಾತನ್ನು ತೊದಲಿತು !—" ಬ-ಬ-ಬಂ-ದೆ-ಯಾ ? " ಎಂದು.

ಅಬ್ಬಾ ! ಏನು ದಿಗ್ವಿಜಯ !

" ಕಾಣೋಲ್ಲವೆ ? "

ಅವಳೂ ಮಾತನಾಡಿದಳು ! ಎಂತಹ ಕೊಳಲದನಿ ! ಕನಸು—ಎಂದು ಒಂದು ಅಣುವಿನಷ್ಟು ಸಂದೇಹವಿದ್ದಿದ್ದರೂ ಈ ಕೊಳಲ ಗಾನದಿಂದ ಅದು ಸರಿದು ಹೋಯಿತು. ಇಲ್ಲ !—ಎಷ್ಟು ಮಾತ್ರಕ್ಕೂ ಇದು ಕನಸಲ್ಲ ! ಹೇಗೆ ಆದೀತು ? ಈ ಕ್ಷಣದಲ್ಲಿ—ಕೈ ನೀಡುವುದೇ ತಡ . . . . ಇಲ್ಲ ! ಇಲ್ಲ ! . . ಕಣ್ಣು ಒಂದೇ ಮೋಸಹೋಗಬಹುದು ; ಕಿವಿಯೊಂದೇ ಮೋಸಹೋಗಬಹುದು . . . ಆದರೆ ಒಟ್ಟಿಗೆ ? . . ಇಲ್ಲ ! ಕಣ್ಣು ಮೋಸಹೋಯಿತೆಂದುಕೊಂಡರೆ ಕಿವಿ "ಕೇಳುವುದಿಲ್ಲವೆ ?" ಎನ್ನುವುದು. ಕಿವಿ ಮೋಸವೆಂದುಕೊಂಡರೆ ಕಣ್ಣು "ಕಾಣುವುದಿಲ್ಲವೆ ?" ಎಂದುಸುರುವುದು. "ಕಾ-ಣೊ-ಲ್ಲ-ವೆ ?"

"ಹು, ಹೌದು ; ನೀ-ನು ಬ-ಬಂದಿದ್ದೀಯ" ಎಂದೆ. ಈ ಮಾತನಾಡಿ, ಆ ಕಡೆ—ಈ ಕಡೆ—ಯಾವಕಡೆಯಾದರೂ ನೋಡೋಣ ಎಂದು ಪ್ರಯತ್ನ ಪಟ್ಟೆ; ಆಗಲಿಲ್ಲ . . ಎಷ್ಟು ಅಸಹಾಯತೆ ! . . . ಅದೂ ಒಬ್ಬ ಅಪರಿಚಿತ ಯುವತಿಯ ಎದುರಿಗೆ ! . . ಅ-ಪ-ರಿ-ಚಿ-ತ-ಳೆ ? ಅದು ಹೇಗಾದೀತು ? ಈ ಇಪ್ಪತ್ತು ದಿನಗಳಲ್ಲಿ ಇಪ್ಪತ್ತು ವರುಷಗಳ ಪರಿಚಯವಾದಂತಿದೆ ! ಅ-ಪ-ರಿ-ಚಿ-ತ-ಳು ! ಅಲ್ಲ ! ಅಲ್ಲ ! ! ಅವಳೂ "ಅಲ್ಲ !" ಎಂದಳು. ಮಾರ್ದನಿ ! ನನ್ನ ಹೃದಯದ ಅಂತರಾಂತರಾಳದ ದನಿಯ ಮಾರ್ದನಿ ! !

"ಏನು—'ಅಲ್ಲ'?" ಎಂದೆ.

"ಅಪರಿಚಿತಳಲ್ಲ !"

ಅದೆಂತಹ ಮಾಯಾವಿ ? ಹೇಗೆ ತಿಳಿಯಿತು ?—ಅವಳಿಗೆ ನನ್ನ ಈ—ಈ ಅತಿಗುಟ್ಟಾದ ಯೋಚನೆ ? ನನ್ನ ಕಳವಳವನ್ನು ಕಂಡು ಅವಳಿಗೆ ನಗು ಬರುವುದರಲ್ಲಿತ್ತು ; ಆದರೆ ಅದು ಮುಗುಳ್ನಗೆಯನ್ನು ದಾಟಲಿಲ್ಲ. ಅದೆಂತಹ ಮುಗುಳ್ನಗೆ ! . . . ಆ ಕಣ್ಣುಗಳೋ ! . . . ಮಾಟಗಾತಿಯೋ ಸರಿ !

"ನಿನಗೆ ನನ್ನ . . . . ."

"ನೀನು ನನ್ನಿಂದ ಏನನ್ನೂ ಮುಚ್ಚಿಡಲಾರೆ !"

ಪುನಃ ! . . ಪ್ರಶ್ನೆ ಕೇಳುವುದಕ್ಕೆ ಮೊದಲೇ ಉತ್ತರ !

"ಏನನ್ನೂ ಮುಚ್ಚಿಡಲಾ . . . . . . . ."

"ನಿನ್ನ ಆ ಕಣ್ಣುಗಳು ಏನನ್ನೂ ಮುಚ್ಚಿಡಲಾರವು !"

ಆ ಕ್ಷಣದಲ್ಲಿ ಕೈಗಳಿಂದ ಕಣ್ಣನ್ನು ಮುಚ್ಚಿಕೊಳ್ಳಲು ಪ್ರಯತ್ನಿಸಿದೆ ; ಆಗಲಿಲ್ಲ. ರೆಪ್ಪೆಯನ್ನೂ ಮುಚ್ಚಲಾರದೆ ಹೋದೆ ! ಎಂತಹ ದುರ್ಬಲತೆ—

ಈ ಮಾಟಗಾತಿಯು ಎದುರಿನಲ್ಲಿ ! . . ನನ್ನ ಕಂಠವನ್ನು ದಾಟದ ಗುಟ್ಟೊ ನನ್ನದಲ್ಲವಲ್ಲಾ !! ನನ್ನ ಮನಸ್ಸಿನಲ್ಲಿ ಮಾತಿಗೆ ಸಿಲುಕದ ಗಲಿಬಿಲಿ ಯೊಂದು ಎದ್ದಿತು. ಏಳಲು ಪ್ರಯತ್ನ ಪಟ್ಟೆ; ಆಗಲಿಲ್ಲ. ಈ ಮಾಟ ಗಾತಿಯು ಎದುರಿನಲ್ಲಿ ನನ್ನ ಯಾವ ಪ್ರಯತ್ನವೂ ನಿಷ್ಫಲವಾಗುವಂತೆ ತೋರಿತು. ಅವಳು ತನ್ನ ಆ ಕಣ್ಣುಗಳನ್ನು ಒಂದು ಕ್ಷಣಾರ್ಧಕಾಲ ಆ ಕಡೆ ಈ ಕಡೆ ಮಿಂಚಿಸಿದ್ದರೆ ನಾನು ಎದ್ದುಬಿಡುತ್ತಿದ್ದೆ. ಆದರೆ ಇಲ್ಲ. ನನ್ನನ್ನು ಹತೋಟಿಯಲ್ಲಿಟ್ಟಿದ್ದುದು ತನ್ನ ಕಣ್ಣುಗಳು—ಎಂದು ಅವಳು ಚೆನ್ನಾಗಿ ಅರಿತಿದ್ದಳೆಂದು ತೋರುತ್ತದೆ; ನನ್ನ ಮೇಲೆ ಅವುಗಳ ಪ್ರಯೋಗ ವನ್ನು ಪೂರ್ಣವಾಗಿ ಮಾಡಿದ್ದಳು. ಆದರೆ ಅದೇನು ಅವಳ ದಯೆಯೋ ! ನಾಲಗೆಯನ್ನು ಮಾತ್ರ ಬಂಧಿಸಿರಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ, ಮೆಲ್ಲಗೆ ಕೇಳಿದೆ—

"ನೀನು . . ಇಲ್ಲಿಗೆ . . ಬರಲು . . ."

"ನೀನೇ ಕರೆಯಲಿಲ್ಲವೆ ?"

"ನಾನು ?—ನಾ—ನು ?"

ಮಾಟಗಾತಿ !

"ನೀನು—ನಿನ್ನ ಹೃದಯ—ನಿನ್ನ ಕಣ್ಣು ; ತಿಳಿಯಿತೆ ?"

"ನಾ—ನು, ನನ್ನ ಹೃ—ದ . . . ."

"ಈ ಇಪ್ಪತ್ತು ದಿನಗಳಿಂದ !"

"ಈ-ಇ-ಪ್ಪ-ತ್ತು-ದಿ-ನ-ಗ-ಳಿಂ-ದ !"

"ಹೌದು !—ಸುಳ್ಳೆ ?" ಸುಳ್ಳು ಹೇಗಾದೀತು ? . . ಆದರೆ . . ಇವ ಳಿಗೆ ಹೇಗೆ—ಹೇಗೆ—ಅದು ಹೇಗೆ ಗೊತ್ತಾಯಿತು ?—ಈ ಮಾಟ ಗಾತಿಗೆ ?

"ಸುಳ್ಳಲ್ಲ, ಆದರೆ ನಿನಗೆ ಗೊತ್ತಾದ . . ."

"ಅದೆಲ್ಲ ನಮ್ಮದೊಂದು ಮಾಟ !"

ಅಬ್ಬಾ ! ಮಾ-ಟ-ಗಾ-ತಿ-ಯೇ ಸರಿ !! ಕ್ಷಣಕಾಲ ಮೂಕನಂತಾದೆ.

ಆ ಮೇಲೆ ಪುನಃ ಹೇಳಿದೆ—

"ಅಂತೂ ಬಂದೆಯಲ್ಲಾ !"

"ಸಂತೋಷವಾಯಿತೆ ?"

"ನೀನು ಹೆಂಗುಸಲ್ಲವೆ ?"

" ನಿನ್ನ ಸರಸ್ವತಿಯೂ ಹೆಂಗುಸಲ್ಲವೆ ? "

ನನ್ನ ಸರಸ್ವತಿ ! ಎಂತಹ ಪ್ರಶ್ನೆ !

" ನನ್ನ ಸರು ನಿನಗೆ ಹೇ . . . "

" ಅವಳದೇ ಅಲ್ಲವೆ ಆ ಕಾಗದ ? "

ಕಾಗದವನ್ನು ಮುದುರಿ ಎಸೆದುಬಿಡೋಣವೆನ್ನಿಸಿತು—ಆಗಲಿಲ್ಲ. ಅಸಹಾಯತೆ ! ಅಯ್ಯೋ !—ಅಸಹಾಯತೆಯೆ ! ನನ್ನ ನಾಲಿಗೆ ಒಂದು ಮಾತ್ರ ನನ್ನ ಸ್ವಾಧೀನ.

" ಹೌದು ಅವಳದೇ. "

" ಏನು ಉತ್ತರ ಬರೆಯುವೆ ? "

" ಏನು ಬರೆಯಲಿ ? "

" ' ನಿನಗಿಂತ ಸುಂದರಿ ಒಬ್ಬಳು ಸಿಕ್ಕಿದ್ದಾಳೆ '—ಎಂದು ಬರಿ. "

" ಅದು ಹೇಗೆ ? "

" ಅದು ಹಾಗಲ್ಲದಿದ್ದರೆ ನೀನು ಹೀಗಾಗುತ್ತಿದ್ದೆಯಾ ? "

" ಹೇಗೆ ? "

" ಹುಚ್ಚು ಹಿಡಿದ ಪತಂಗದ ಹಾಗೆ ! "

ಹುಚ್ಚ ! ಪ-ತಂ-ಗ ! ಕೇವಲ ನನ್ನದು—ಎಂದು ಹೇಳಿಕೊಳ್ಳುವುದಕ್ಕೆ ಗುಟ್ಟಾದ ಒಂದು ಯೋಚನೆಯೂ ಇಲ್ಲವಾಯಿತು ನನಗೆ ಈ—ಈ—

" ಶೀತಳವಾದ ಜ್ವಾಲೆಯ ದೆಸೆಯಿಂದ. "

" ಹೌದು ! ಹೌದು !! ನೀನು ಶೀತಳವಾದ ಜ್ವಾಲೆ ! "

" ಖಂಡಿತವಾಗಿಯೂ ? "

" ಸತ್ಯವಾಗಿಯೂ ! "

" ನಿನ್ನ ಸರೂ . . . ಆಣೆಗೂ ? "

ನನ್ನ ಸರೂ—ಆಣೆಗೂ ! ಎಂತಹ ಬರೆ ಎಳೆಯುವ ಪ್ರಶ್ನೆ ! ಇದಕ್ಕೆ ಉತ್ತರವುಂಟೇ ?—ಏನು ಹೇಳಲಿ ? ನನ್ನ ಸರೂ ಎಲ್ಲಿ ?—ಈ—ಈ—ಓ ! ಏನೆಂದು ಹೇಳಲಿ ?

" ಹಾಗಾದರೆ ನೀನು ಮಾಡುತ್ತಿರುವುದು ಯೋಗ್ಯವೆ ? "

" ಏನು ? "

" ಅನ್ಯಾಯ—ಸರಸ್ವತಿಗೆ ! ಕೈಹಿಡಿದವಳಿಗೆ ಮೋಸ ! "

" ಮೋಸವೇನು ? "

"ಮೋಸವಲ್ಲದೆ ಮತ್ತೇನು? ನನ್ನಿಂದ ಒಂದು ಯೋಚನೆಯೂ ಹೊರನುಗ್ಗಿ ಬಿಚ್ಚಿಡಲಾರೆ! ಹೇಳು—ನಿನಗೆ ನನ್ನಲ್ಲಿ ಅಪೇಕ್ಷೆ !—ಅಲ್ಲವೆ ? "

" ಮಾತನಾಡಬೇಕೆಂದು—ಅಷ್ಟೆ."

" ಅಷ್ಟೇ ?—ಅಷ್ಟೇಯೋ ? "

" ಹೌದು ; ಅಷ್ಟೆ."

" ಅದರ ಹಿಂದೆ ಮತ್ತೇನೂ ಇಲ್ಲವೆ ? "

" ಇದ್ದರೆ ನಿನಗೆ ತಿಳಿಯುವುದಿಲ್ಲವೆ ? "

" ತಿಳಿಯದೆ ಏನು ! "

" ಹಾಗಾದರೆ ಅದೇನು—ಹೇಳು ! "

" ನಿನಗೆ ನಾನು ಬೇಕು—ನನ್ನನ್ನು ಹೊಂದಬೇಕೆಂದು ಅಡಗಿಸಲಾಗದ ಆಸೆ ನಿನಗೆ ! "

" ನಿನ್ನನ್ನು ನೋಡಿದವರು ಯಾರು ತಾನೆ ಅಂತಹ ಆಸೆಯನ್ನು ಅಡಗಿಸಬಲ್ಲರು ! "

" ಬುದ್ಧಿ ಇದ್ದವರು."

" ಆ ಕಣ್ಣುಗಳೆದುರಿಗೆ ಎಷ್ಟು ಬುದ್ಧಿ ತಾನೇ ನಿಂತೀತು ! "

" ನೀನು ಮಾಡುತ್ತಿರುವುದು ಹುಚ್ಚುಕೆಲಸ ! ನೀನು ಹುಚ್ಚ !—ಶುದ್ಧ ಹುಚ್ಚ !! "

" ಹುಚ್ಚನ ಹತ್ತಿರ ಏತಕ್ಕೆ ಬಂದೆ ? "

" ಬುದ್ಧಿ ಕಲಿಸುವುದಕ್ಕೆ ! "

" ಬು-ದ್ಧಿ-ಕ-ಲಿ-ಸು-ವು-ದ-ಕ್ಕೆ—ಎಷ್ಟು ಧೈರ್ಯ ! "

" ಧೈರ್ಯವೇನು ? "

" ಇಲ್ಲಿ . . . ನಾನು ಒಬ್ಬನೆ ! . . . ಮೇಲೆ ನಿನಗಾಗಿ ಉನ್ಮತ್ತ !! . . . ಧೈರ್ಯವಲ್ಲವೆ ?—ಇದು ? "

" ನೀನು ನನಗೆ ಏನೂ ಮಾಡಲಾರೆ ! ನನ್ನನ್ನು ಮುಟ್ಟಲೂ ಆರೆ ! "

" ಏನು ? ಇಷ್ಟು ಹತ್ತಿರ ! . . . ನಾನು ಮುಟ್ಟಲಾರನೆ ? . . . ಈ ಕ್ಷಣದಲ್ಲಿ . . ."

" ಹೋ ! ಹೋ ! ಅದು ಅಷ್ಟು ಸುಲಭವಲ್ಲ ! "

" ಇದು ಸುಲಭವಲ್ಲದಿದ್ದರೆ ಇನ್ನು ಯಾವುದು ಸುಲಭ ಈ ಪ್ರಪಂಚದಲ್ಲಿ ! "

"ನೀನೊಬ್ಬ ಹುಚ್ಚ !"

"ನೀನೇ ಹಿಡಿಸಿದವಳು !"

"ನಾನೇ ಬಿಡಿಸುತ್ತೇನೆ !"

"ಜೀವ ಬಿಡಬಲ್ಲೆ—ಈ ಹುಚ್ಚು ಬಿಡಲಾರೆ !"

"ನಾನು ಹೊರಟೆ."

"ಎಲ್ಲಿಗೆ ?"

"ನಿನ್ನ ಸರೂ—ಹತ್ತಿರಕ್ಕೆ ?"

"ನನ್ನ ಸರೂ ಹತ್ತಿರ !—ಏತಕ್ಕೆ ?"

"ನಿನಗೆ ಬುದ್ಧಿ ಕಲಿಸುವುದಕ್ಕೆ—ನಿನ್ನ ಹುಚ್ಚು ಬಿಡಿಸುವುದಕ್ಕೆ ! . . . ಇಗೋ ಹೊರಟೆ !"

"ಬೇಡ—ಬೇಡ! . . . ಹೋಗಬೇಡ . . . ಇಲ್ಲಿಂದ ಹೋಗಲಾರೆ ನೀನು !"

"ಅದು ಹೇಗೆ ?"

"ನಾನು ತಡೆಯುತ್ತೇನೆ ! ನನ್ನಿಂದ ತಪ್ಪಿಸಿಕೊಳ್ಳಬಲ್ಲೆಯಾ ನೀನು ?"

"ನೀನು ತಡೆಯಲಾರೆ ! ತಪ್ಪಿಸಿಕೊಳ್ಳುವುದೆ ? ಸಿಕ್ಕಿದ್ದರೆ ತಾನೆ ? ಹುಚ್ಚ ! . . . ನೋಡು ಹೊರಟೆ !"

ನನ್ನ ಕಣ್ಣುಗಳನ್ನೇ ನೋಡುತ್ತ, ಮೆಲ್ಲನೆ ಎರಡು ಹೆಜ್ಜೆ ಹಿಮ್ಮೆಟ್ಟಿದಳು. ಇನ್ನೇನು ಹೊರಟು ಹೋಗಿಬಿಡುತ್ತಾಳೆ!—ಎಂದಿಗೂ ನನ್ನ ಸಮೀಪಕ್ಕೆ ಬರುವುದಿಲ್ಲ! ಇದೊಂದು ಕ್ಷಣ—ಈಗ ತಪ್ಪಿದರೆ ನನ್ನ ಜೀವಮಾನದಲ್ಲೇ ಪುನಃ ಬರಲಾರದು, ಇಂತಹ ಇನ್ನೊಂದು ಕ್ಷಣ . . . ಇಲ್ಲ. ನಾನು ಏಳಲೇ ಬೇಕು ! . . . ಎದ್ದೆ. ಅವಳು ಇನ್ನೊಂದು ಹೆಜ್ಜೆ ಹಿಮ್ಮೆಟ್ಟಿದಳು. ನಾನು ಮುಂದುವರಿದ ಹಾಗೆಲ್ಲ ಅವಳು ಹಿಂದೆ ಹಿಂದೆ ಸರಿಯುತ್ತ ಹೋದಳು. ಇಪ್ಪತ್ತು ದಿನಗಳ ಅಡಗಿದ್ದ ಆಸೆಯೆಲ್ಲಾ ಈ ಒಂದು ಕ್ಷಣದಲ್ಲಿ ಅಪ್ಪಳಿಸಿ—ಆರ್ಭಟಿಸಿ ಹೊರಟಿತು ! . . . ಕೈಗಳನ್ನು ಚಾಚಿ—ಅವಳ ಕಣ್ಣಿಗೆ ಕಣ್ಣು ಸೇರಿಸಿದೆ. ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಹಿಮ್ಮೆಟ್ಟುತ್ತಿದ್ದಳು. ಇನ್ನೇನು ಹೋಗಿ ಬಿಡುತ್ತಾಳೆ !—ಓಡಿ ಬಿಡುತ್ತಾಳೆ ! ಮಾಯವಾಗಿ ಬಿಡುತ್ತಾಳೆ ! ಕೈಗಳನ್ನು ಚಾಚಿಕೊಂಡು ಥಟ್ಟನೆ ಮುಂದಕ್ಕೆ ಹಾರಿದೆ ! ನನ್ನ ನೆಗೆತಕ್ಕೆ ಸರಿಯಾಗಿ ಅವಳೂ ಚಂಗನೆ

ಮೇಲಕ್ಕೆ ಹಾರಿದಳು ! ಹಾರಿ ಗೋಡೆಯ ಮೇಲಿದ್ದ ಚೌಕಟ್ಟನ್ನು ಸೇರಿದಳು. ನನ್ನ ತಲೆ ಗೋಡೆಗೆ ಬಡಿಯಿತು ! . . .

*　　*　　*　　*

ತಲೆಯನ್ನು ಉಜ್ಜಿಕೊಳ್ಳುತ್ತ ಅವಳ ಪಠವನ್ನು ನೋಡುತ್ತಿದ್ದೆ ! ನಾನು ಇಪ್ಪತ್ತು ದಿನಗಳಿಂದ ನೋಡುತ್ತಿದ್ದುದು—ಆ ಪಠವನ್ನು !—

ಅಂದರೆ ಅವಳ ಪಠವನ್ನು !!

ಕೊನೆಯ ಮಾತು ; ನಗಬೇಡಿ—

ನನಗೆ ಇನ್ನೂ ಬಿಟ್ಟಿಲ್ಲ—ಹುಚ್ಚು !!

# ನಾನು ಕೊಂದ ಹುಡುಗಿ

೧

ಆರೇಳು ವರ್ಷಗಳ ಹಿಂದಿನ ಮಾತು. ಬೇಸಗೆಯ ರಜದಲ್ಲಿ ನಮ್ಮ (ಮೈಸೂರು) ಸೀಮೆಯನ್ನೆಲ್ಲಾ ಸುತ್ತಿಕೊಂಡು ಬರಬೇಕೆಂದು ಹೊರಟೆ. ನನಗೆ ನಮ್ಮ ದೇಶದಲ್ಲಿರುವ ಹೆಸರುಗೊಂಡ ಶಿಲಾಶಿಲ್ಪಗಳ ವೈಖರಿಯನ್ನೆಲ್ಲಾ ಚಿತ್ರರೂಪದಲ್ಲಿ ಸಂಗ್ರಹಿಸಬೇಕೆಂಬ ಒಂದು ಹುಚ್ಚು ಹಿಡಿದಿತ್ತು. ಸೋಮನಾಥಪುರ, ಬೇಲೂರು, ಹಳೇಬೀಡು ಮುಂತಾದ ಸ್ಥಳಗಳಲ್ಲಿನ ದೇವಾಲಯಗಳ ವರ್ಣನೆಗಳನ್ನು ಪುಸ್ತಕಗಳಲ್ಲಿ ಓದಿದಾಗ "ಇರಲಿ! ಸಾಯದೆ ಬದುಕಿದ್ದರೆ ಒಂದಲ್ಲ ಒಂದು ದಿನ ಅವುಗಳನ್ನೆಲ್ಲಾ ಕಣ್ಣಾರೆ ನೋಡಿಕೊಂಡು ಬರುತ್ತೇನೆ!'' ಅಂದುಕೊಂಡಿದ್ದೆ. ಆದುದರಿಂದ ನಾನು ಸಂಚಾರ ಹೊರಟಾಗ ನನ್ನ ಆಸೆಯ ಕನಸು ನಿಜವಾಗುವಂತಾಯಿತಲ್ಲಾ !— ಎಂದು ಹಿಗ್ಗಿದೆನು.—ಇಲ್ಲಿ ನಾನು ಮುಂದೆ ಹೇಳುವ ವಿಷಯ—ನನ್ನ ಸಂಚಾರವನ್ನು ಕುರಿತು ಒಂದು ಉಪನ್ಯಾಸವಲ್ಲ. ನನ್ನ ಸಂಚಾರದ ಮಧ್ಯದಲ್ಲಿ, ಒಂದು ಹಳ್ಳಿಯಲ್ಲಿ ನಡೆದ ಒಂದೆರಡು ದಿನಗಳ ಸಂಗತಿಯನ್ನು ಕುರಿತು.

ಆ ಹಳ್ಳಿಯ ಹೆಸರು ನಾಗವಳ್ಳಿ. ನಾನು ಅಲ್ಲಿಗೆ ಬರುವ ವೇಳೆಗೆ ನನ್ನ ಸಂಚಾರ ಮುಕ್ಕಾಲುಪಾಲು ಮುಗಿದಿತ್ತು ಅನ್ನಬಹುದು. ಅಷ್ಟುಹೊತ್ತಿಗಾಗಲೆ ಸುಮಾರು ನೂರು-ನೂರೈವತ್ತು ಚಿತ್ರಗಳನ್ನು ಸಂಗ್ರಹಿಸಿದ್ದೆ. ಎಲ್ಲವೂ ನಾನೇ ಸ್ವಂತವಾಗಿ ತೆಗೆದ ಫೋಟೋಗಳು.

ನಾಗವಳ್ಳಿಯಲ್ಲಿ ಕರಿಯಪ್ಪನವರೆಂಬುವರು ಬಹಳ ಗಣ್ಯರಾದವರು. ಆ ಹಳ್ಳಿಗೆಲ್ಲಾ ಯಜಮಾನರಂತಿದ್ದರು. ನಾನು ಅವರ ಮನೆಯಲ್ಲಿಯೇ ಉಳಿದುಕೊಂಡಿದ್ದದ್ದು. ಕಥೆ ಇಲ್ಲಿಂದ ಪ್ರಾರಂಭ ಎಂದು ಇಟ್ಟುಕೊಳ್ಳಬಹುದು.

ನಾನು ಆ ಹಳ್ಳಿಗೆ ಬಂದಾಗ ರಾತ್ರೆ ಸುಮಾರು ಒಂಭತ್ತು ಗಂಟೆಯ ಸಮಯ. ನನ್ನ ಸಾಮಾನುಗಳನ್ನೆಲ್ಲಾ ಒಂದು ಸಂತೆಯ ಗಾಡಿಯಲ್ಲಿ ಹಾಕಿ ನಾನು ಅದರ ಹಿಂದೆ ನಡೆದುಕೊಂಡು ಬಂದೆ. ರಾತ್ರಿಯೆಲ್ಲಾ ಆ

ಎತ್ತಿನ ಗಾಡಿಯಲ್ಲಿ ಪ್ರಯಾಣಮಾಡುವುದು ನನಗೆ ಸರಿಬೀಳಲಿಲ್ಲ. ಆ ರಾತ್ರಿ ಆ ಹಳ್ಳಿಯಲ್ಲೇ ಉಳಿದುಕೊಳ್ಳೋಣ ಅನ್ನಿಸಿತು. ಉಳಿದುಕೊಳ್ಳುವುದಕ್ಕೆ ಸರಿಯಾದ ಸ್ಥಳ ಯಾವುದಾದರೂ ಇದೆಯೇ—ಎಂದು ಗಾಡಿಯವನನ್ನು ವಿಚಾರಿಸಿದೆ. ಅವನು ಕರಿಯಪ್ಪನವರ ಹೆಸರನ್ನು ಹೇಳಿ "ಸ್ವಾಮಿ, ಅಪ್ಪಣೆಯಾದರೆ ಅವರ ತಾವ ಹೋಗಿ ಹೇಳ್ತೀನಿ—ಅವರು ಎಲ್ಲಾ ಅನುಕೂಲಮಾಡ್ತಾರೆ ಬುದ್ಧೀ" ಅಂದ. ನಾನು "ಆಗಬಹುದು" ಎಂದೆ. ಇನ್ನು ಹತ್ತುಮಾರು ಹೋಗುವುದರಲ್ಲಿ ಅವರ ಮನೆ ಸಿಕ್ಕಿತು. ನಾನು ಗಾಡಿಯ ಹತ್ತಿರದಲ್ಲೇ ನಿಂತಿದ್ದೆ. ಗಾಡಿಯವನು ಇಳಿದು ಮನೆಯ ಕಡೆ ಹೋಗಿ ಒಂದೆರಡು ನಿಮಿಷ ಬಿಟ್ಟುಕೊಂಡು ಇನ್ನೊಬ್ಬ ಗಂಡಸಿನೊಡನೆ ಬಂದು "ಬುದ್ಧೀ, ಇವರೇ ಕರಿಯಪ್ನೋರು ಅನ್ನೋರು" ಎಂದು ಹೇಳಿದ. ಕರಿಯಪ್ಪನವರು ನನ್ನ ಸಮೀಪಕ್ಕೆ ಒಂದು ಬಹಳ ನಮ್ರಭಾವದಿಂದ ಕೈಮುಗಿದು "ಸ್ವಾಮಿ, ದಯಮಾಡಿ. ಇದು ತಮ್ಮ ಮನೇ ಎಂದೇ ತಿಳೀಬೇಕು" ಎಂದು ಹೇಳಿದರು. ನಾನೂ ಅವರಿಗೆ ಕೈಮುಗಿದು "ತಮಗೆ ತೊಂದರೆ ಕೊಟ್ಟಹಾಗಾಯಿತು" ಎಂದೆ. ಅದಕ್ಕೆ ಅವರು "ಸ್ವಾಮಿ, ಎಲ್ಲಾದರೂ ಉಂಟೆ! ತೊಂದರೆ ಹೇಗೆ ಸ್ವಾಮಿ! ತಾವು ದೊಡ್ಡ ಮನಸ್ಸುಮಾಡಿ, ನನ್ನ ಮನೆಗೆ ಬರಲು ಒಪ್ಪಿದರಲ್ಲಾ ಅದೇ ನನ್ನ ಪುಣ್ಯ! ತೊಂದರೆ ಗಿಂದ್ರೆ ಅನ್ನಬೇಡಿ ಸ್ವಾಮಿ; ಹೀಗೆ ದಯಮಾಡಬೇಕು" ಎಂದು ತಮ್ಮ ಮನೆಯ ಕಡೆ ಕೈತೋರಿಸಿ, ಗಾಡಿಯವನನ್ನು ಕರೆದು "ಲೋ ತಿಮ್ಮಾ, ಧಣಿಗಳ ಸಾಮಾನ್ನೆಲ್ಲಾ ಜಗ್ಲೀಮೇಲೆ ತಂದಿಡೋ" ಎಂದು ಹೇಳಿದರು.

ನಾವು ಹೋಗಿ ಅವರ ಮನೆ ಜಗುಲಿಯ ಮೇಲೆ ಹಾಸಿದ್ದ ಚಾಪೆಯ ಮೇಲೆ ಕುಳಿತುಕೊಂಡೆವು. ಕರಿಯಪ್ಪನವರದು ದೊಡ್ಡ ಸಂಸಾರ. ತುಂಬಿದ ಮನೆ. ನಾನು ಹೋಗಿ ಕುಳಿತೊಡನೆಯೆ ಒಳಗಿನಿಂದ ಮೂರು ನಾಲ್ಕು ಸಣ್ಣ ಸಣ್ಣ ಮಕ್ಕಳು ಹೊರಕ್ಕೆ ಓಡಿಬಂದು ಕುತೂಹಲದಿಂದ ನನ್ನ ಸುತ್ತಲೂ ನಿಂತುಕೊಂಡರು. ನನ್ನ ಹ್ಯಾಟು, ಬೂಟು ಎಲ್ಲಾ ಅವರಿಗೆ ತಮಾಷೆಯಾಗಿ ಕಂಡಿರಬೇಕು!

ಜಗುಲಿಯ ಒಂದು ಪಕ್ಕಕ್ಕೆ ಒಂದು ಕೊಠಡಿ. ಮನೆಯ ಆಳು ಅದರ ಬಾಗಿಲನ್ನು ತೆರೆದು ಗುಡಿಸಿ ಚಾಪೆ ಹಾಕಿ ಒಂದು ದೀಪವನ್ನು ತಂದಿಟ್ಟ. ಗಾಡಿಯವನು ನನ್ನ ಸಾಮಾನುಗಳನ್ನೆಲ್ಲಾ ಆ ಕೊಠಡಿಯೊಳಗೆ ಇಟ್ಟು

ಬಂದ. ಅವನಿಗೆ ಸಲ್ಲಬೇಕಾಗಿದ್ದ ಬಾಡಿಗೆ ಕೊಟ್ಟು ಕಳಿಸಿಬಿಟ್ಟೆ. ಕರಿಯಪ್ಪನವರು "ಸ್ವಾಮಿ, ಇನ್ನು ಬಟ್ಟೆ ಬಿಚ್ಚಬಹುದಲ್ಲ" ಎಂದರು. ನಾನು ಎದ್ದು ಕೊಠಡಿಯೊಳಗೆ ಹೋಗಿ, ನನ್ನ ಬಟ್ಟೆಗಳನ್ನೆಲ್ಲಾ ಬಿಚ್ಚಿ, ಪಂಚೆ ಉಟ್ಟು ಷರಟು ಹಾಕಿಕೊಂಡು ಬಂದೆ. ಅಷ್ಟುಹೊತ್ತಿಗೆ ಯಾರೋ ಒಳಗಿನಿಂದ ಬಿಸಿನೀರು ತಂದಿಟ್ಟರು. ಕೈಕಾಲು ಮುಖ ತೊಳೆದುಕೊಂಡೆ. ಇನ್ನು ಅರ್ಧಗಂಟೆಯಲ್ಲಿ ಊಟವಾಯಿತು. ಪುನಃ ಹೊರಗೆ ಜಗುಲಿಯ ಮೇಲೆ ಕುಳಿತುಕೊಂಡು ತಾಂಬೂಲ ಹಾಕಿಕೊಳ್ಳುತ್ತಾ ಮಾತನಾಡುತ್ತಿದ್ದೆವು. ನನ್ನ ಸಂಚಾರದ ವಿಷಯವನ್ನು ಅವರಿಗೆ ವಿವರಿಸಿ ಹೇಳಿದೆ. ನಾನು ಅವರ ಮನೆಯಲ್ಲಿ ಉಳಿದುಕೊಂಡದ್ದು ಅವರಿಗೆ ಬಹಳ ಸಂತೋಷಕ್ಕೆ ಕಾರಣವಾಯಿತು. ಅದು ಅವರ ನಡೆನುಡಿಯಲ್ಲೇ ತೋರುತ್ತಿತ್ತು. ಮಾತನಾಡುತ್ತ ಆಡುತ್ತ ಅವರ ವಿಷಯವನ್ನೂ ಸ್ವಲ್ಪ ತಿಳಿದುಕೊಂಡೆ. ಬಹಳ ನೆಮ್ಮದಿವಂತರು. ನಾನೂರು ರೂಪಾಯಿ ಕಂದಾಯ ಕೊಡುತ್ತಾರಂತೆ. ಮನೆಯ ತುಂಬಾ ಜನ; ಆಳುಕಾಳುಗಳು—ದನಕರುಗಳು ಯಾವುದರಲ್ಲೂ ಕೊರತೆಯಿಲ್ಲ. ಮನೆಯನ್ನು ದೊಡ್ಡದಾಗಿ ಕಟ್ಟಿಕೊಂಡಿದ್ದರು. ಆ ಹಳ್ಳಿಗೆಲ್ಲಾ ಅದೇ ದೊಡ್ಡದು. ಎಲ್ಲಕ್ಕೂ ಮಿಗಿಲಾಗಿ ನನ್ನ ಮನಸ್ಸಿನಲ್ಲಿ ನಿಂತದ್ದು ಅವರ ನಿಷ್ಕಪಟವಾದ ಸಮ್ಮತಿ. ಅದು ಆ ಜನರಿಗೆ ಬಹಳ ಸ್ವಾಭಾವಿಕವೆಂದು ತೋರಿತು. ಒಟ್ಟಿನಲ್ಲಿ ಅವರ ಮನೆಯಲ್ಲಿ ನನಗೆ ಬಹಳ ಉಪಚಾರವಾಗುತ್ತೆ ಅಂದುಕೊಂಡೆ.

ಊಟವಾದ ಮೇಲೆ ಬಹಳ ಹೊತ್ತು ಮಾತನಾಡುತ್ತಿರಲಿಲ್ಲ. ದಾರಿ ನಡೆದುಬಂದುದರಿಂದ ಸ್ವಲ್ಪ ಆಯಾಸವಾಗಿತ್ತು. ಅವರಿಗೆ ಆ ವಿಷಯವನ್ನು ತಿಳಿಸಿ ಕೊಠಡಿಯೊಳಗೆ ಹೋಗಿ ದೀಪವನ್ನು ಆರಿಸಿ ಮಲಗಿಕೊಂಡುಬಿಟ್ಟೆ.

೨

ಬೆಳಿಗ್ಗೆ ಎಚ್ಚರವಾದಾಗ ಸುಮಾರು ಆರೂವರೆ-ಏಳುಗಂಟೆ ಇರಬಹುದು. ಅಷ್ಟು ಹೊತ್ತಿಗಾಗಲೆ ನನ್ನ ಕೊಠಡಿಯ ಹೊರಗೆ ನೀರು ಸಿದ್ಧವಾಗಿತ್ತು! ಮುಖ ತೊಳೆದುಕೊಂಡು ಕೊಠಡಿಯಲ್ಲೇ ಕುಳಿತಿದ್ದೆ. ಕರಿಯಪ್ಪನವರು ತಾವೇ ಕೈಯಲ್ಲಿ ಒಂದು ಬಟ್ಟಲು ಹಾಲನ್ನು ತೆಗೆದು ಕೊಂಡು ಬಂದರು. ಅವರ ಮನೆಯಲ್ಲಿ ಕಾಫಿ ಅಭ್ಯಾಸವಿಲ್ಲ! ನನಗೆ ಹಾಲು ಅಭ್ಯಾಸವಿಲ್ಲ! ಹೇಗೊ—ಅವರು ಅಷ್ಟು ಆದರದಿಂದ ತಂದ

ದ್ದನ್ನು ಬೇಡವೆನ್ನಬಾರದೆಂದು—ಕುಡಿದೆ. ಆ ಮೇಲೆ ಅವರನ್ನು ಅಲ್ಲೇ ಕೂರಿಸಿಕೊಂಡು ನಾನು ಸಂಚಾರಮಾಡಿ ತಂದಿದ್ದ ಚಿತ್ರಗಳನ್ನೆಲ್ಲಾ ತೋರಿಸಿ, ಅವುಗಳ ವಿಷಯವಾಗಿ ನಾನು ತಿಳಿದುಕೊಂಡಿದ್ದನ್ನು ಹೇಳಿದೆ. ಕೇಳಿ ಅವರಿಗಾದ ಸಂತೋಷವನ್ನೂ ಆಶ್ಚರ್ಯವನ್ನೂ ನಾನು ವಿವರಿಸ ಲಾರೆ. ಅವರು ನನ್ನನ್ನು ನೋಡಿ "ಸ್ವಾಮಿ, ತಾವು ಒಪ್ಪೋದಾದ್ರೆ— ಇಲ್ಲೇ ಹತ್ತಿರದಲ್ಲೇ ಒಂದು ದೇವಸ್ಥಾನ ಇದೆ—ರಂಗಪ್ಪನ ಗುಡಿ—ಬಹಳ ಹಳೇದು ಸ್ವಾಮಿ; ಬಲು ಉಚಿತವಾಗಿದೆ! ಬಹಳ ದೂರಾನೂ ಇಲ್ಲ" ಎಂದರು. ನನಗೆ ಕಿವಿ ನೆಟ್ಟಗಾಯಿತು.

"ಎಲ್ಲಿ?" ಎಂದು ಕೇಳಿದೆ.

"ಇಲ್ಲೇ, ಇಲ್ಲಿಗೆ ಒಂದು ಹರಿದಾರಿ ದೂರ್ದಾಗಿದೆ; ಅದೋ ನೋಡಿ ಕಾಣೋಕಿಲ್ವೆ ಆ ಮರಡಿ ಬೆಟ್ಟ—ಅದರ ಬುಡ್ದಾಗಿದೆ."

ನನಗೆ ಬೇಲೂರಿನಲ್ಲಿ ತೆಗೆದಿದ್ದ ಚಿತ್ರಗಳಲ್ಲಿ ಕೆಲವಕ್ಕೆ ಟಿಪ್ಪಣಿ-ವಿವ ರಣೆ ಬರೆಯುವುದಿತ್ತು. ಅಲ್ಲದೆ ಲಕ್ಷ್ಮಿಗೆ ಕಾಗದ ಬರೆಯಬೇಕಾಗಿತ್ತು!

"ಸರಿ, ಹಾಗಾದರೆ ನಾಳೆ ಬೆಳಿಗ್ಗೆ ಅಲ್ಲಿಗೆ ಹೋಗಿ ಬರುತ್ತೇನೆ; ಈ ವತ್ತು ಸ್ವಲ್ಪ ಬರೆಯುವ ಕೆಲಸವಿದೆ" ಎಂದು ಹೇಳಿದೆ.

"ತಮ್ಮ ಚಿತ್ತ—ಹಾಗೇ ಆಗಲಿ" ಎಂದರು.

* * * *

ಆ ದಿನ ಟಿಪ್ಪಣಿ-ವಿವರಣೆ ಬರೆಯುವುದರಲ್ಲೇ ಹನ್ನೆರಡು ಗಂಟೆಯಾಗಿ ಹೋಯಿತು. ಊಟವಾದ ಮೇಲೆ ಲಕ್ಷ್ಮಿಗೆ ಕಾಗದ ಬರೆಯುವುದಕ್ಕೆ ಕುಳಿತುಕೊಂಡೆ. ನನ್ನ ಸಂಚಾರದಲ್ಲಿ ಪುರಸತ್ತು ಸಿಕ್ಕಿದಾಗಲೆಲ್ಲಾ ಅವ ಳಿಗೆ ಕಾಗದ ಬರೆಯುತ್ತಿದ್ದೆ. ಎಲ್ಲದರಲ್ಲೂ ಮುಕ್ಕಾಲುಪಾಲು ನನ್ನ ಸಂಚಾರದ ವಿಷಯವೇ—ನಾನು ನೋಡಿದ ದೇವಸ್ಥಾನಗಳು—ನೋಟ ಗಳು, ಅವುಗಳ ವರ್ಣನೆ ಇತ್ಯಾದಿ. ನನ್ನ ಸಂಚಾರದಲ್ಲಿ ಲಕ್ಷ್ಮಿಯು ನೆನಪು ನಿತ್ಯವೂ ನನ್ನನ್ನು ಎಡೆಬಿಡದೆ ಹಿಂಬಾಲಿಸುತ್ತಿತ್ತು. ಎಷ್ಟೋ ಸಾರಿ "ಅಯ್ಯೋ! ಈ ಸೊಬಗನ್ನು ನೋಡುವುದಕ್ಕೆ ನನ್ನ ಲಕ್ಷ್ಮಿ ಇಲ್ಲವಲ್ಲಾ! ಅವಳು ನನ್ನ ಸಮೀಪದಲ್ಲಿ ಇದ್ದಿದ್ದರೆ ಅವುಗಳ ಸೊಬಗು ಇನ್ನೂ ಹೆಚ್ಚುತ್ತಿತ್ತು!" ಅಂದು ಕೊಂಡಿದ್ದೇನೆ. ಆ ದಿನ ನಾನು ನಾಗವಳ್ಳಿಗೆ ಬಂದದ್ದು, ಅಲ್ಲಿ ಕರಿಯಪ್ಪನವರ ಆದರಣೀಯವಾದ ಆತಿಥ್ಯ—ಉಪಚಾರ—ಅವರ ಮಕ್ಕಳು ಮರಿ ವಿಚಾರ ಎಲ್ಲಾ ಬರೆದು—

ನಾಳೆ ನುರಡಿ ಬೆಟ್ಟಕ್ಕೆ ಹೋಗಬೇಕೆಂದಿರುವುದನ್ನೂ ತಿಳಿಸಿ— ಆ ಮೇಲೆ ನಮ್ಮ ನಮ್ಮ ಕೆಲವು ಮಾತುಗಳನ್ನು ಬರೆದು ಕಾಗದವನ್ನು ಮುಗಿಸಿದೆ. ಆ ಹಳ್ಳಿಯಲ್ಲಿ ಟಪಾಲು ಆಫೀಸು ಇಲ್ಲ; ಒಂದು ಟಪಾಲು ಪೆಟ್ಟಿಗೆ ಮಾತ್ರ ಇದೆ; ವಾರಕ್ಕೆ ಎರಡು ಸಲವೋ ಮೂರು ಸಲವೋ ಬೇಲೂರಿಂದ ಅಂಚೆಯವನು ಬಂದು ಕಾಗದಗಳನ್ನು ತೆಗೆದುಕೊಂಡುಹೋಗುತ್ತಾನೆ. ವಿಚಾರಿಸಿದ್ದರಲ್ಲಿ ಆ ವಿಷಯ ತಿಳಿಯಿತು. ಆದರೆ ಟಪಾಲು ಪೆಟ್ಟಿಗೆ ಎಲ್ಲಿತ್ತೋ ಗೊತ್ತಿರಲಿಲ್ಲ. ಆಳು ಯಾರಾದರೂ ಇದ್ದರೆ ಅವನ ಕೈಲಿ ಕಾಗದವನ್ನು ಟಪಾಲು ಪೆಟ್ಟಿಗೆಗೆ ಕಳಿಸಬಹುದೆಂದು ಯೋಚಿಸಿ, ಕೊಠಡಿಯಿಂದ ಹೊರಗೆ ಬಂದೆ. ನಾನು ಹೊರಗೆ ಬಂದಾಗ ಕೊಠಡಿಗೆ ಎದುರಾಗಿ ಸ್ವಲ್ಪ ದೂರದಲ್ಲಿ ಜಗುಲಿಯ ಕಂಭವನ್ನು ಒರಗಿಕೊಂಡು ಒಬ್ಬ ಪ್ರಾಯದ ಹುಡುಗಿ ಕುಳಿತಿದ್ದಳು. ಯಜಮಾನರ ಮಗಳಿರಬಹುದೆಂದು ತೋರಿತು. ನಾನು ಹೊರಗೆ ಬಂದವನು ಆಳನ್ನು ಕಾಣದೆ, ಏನು ಮಾಡಬೇಕೆಂದು ತೋಚದೆ ನಿಂತಿರಲು, ನಾನು ನೋಡಿದಾಕೆಯು ಎದ್ದು ಬಂದು "ಏನು ಬುದ್ದೀ, ಏನಾಗ್ಬೇಕು ಅಪ್ಪಣೆಯಾಗಲಿ" ಎಂದು ಕೇಳಿ ಸ್ವಲ್ಪ ಹಸನ್ಮುಖಿಯಾದಳು. ಆ ಹಳ್ಳಿಯ ಹುಡುಗಿಯ ನಯವನ್ನೂ ಸರಳತೆಯನ್ನೂ ನೋಡಿ ನನಗೆ ಸಂತೋಷವಾಯಿತು. ನಾನು ಹೇಳಿದೆ—

"ಏನೂ ಇಲ್ಲವಮ್ಮಾ ; ಈ ಕಾಗದಾನ ಟಪಾಲಿಗೆ ಕಳಿಸಬೇಕಾಗಿತ್ತು. ಆ ಪೆಟ್ಟಿಗೆ ಎಲ್ಲಿದೆಯೋ ನಂಗೊತ್ತಿಲ್ಲ. ಹೇಳ್ತೀಯಾ ?"

ಆಕೆ ನಗುತ್ತ ನನ್ನ ಕಡೆಗೆ ಎರಡು ಹೆಜ್ಜೆ ಇಟ್ಟು—

"ಅದ್ಯಾಕ್ಬುದ್ದೀ ಓಟೊಂದು ತೊಂದ್ರೆ ತಮ್ಗೆ! ಆ ಕಾದ್ಗಾನ ಇಲ್ಕೊಡಿ ನನ್ನೊಡ್ಯಾ—ನಾನೋಗಿ ಹಾಕ್ತೀನಿ" ಅಂದಳು.

ಅವಳ ಮಾತುಗಳನ್ನು ಕೇಳಿ, ಅವಳೊಡನೆ ಇನ್ನೂ ನಾಲ್ಕು ಮಾತುಗಳನ್ನಾಡಬೇಕೆನ್ನಿಸಿತು !—

"ನಿನಗೆ ತೊಂದರೆ ಅಲ್ವೆ ?" ಎಂದು ಕೇಳಿದೆ.

"ಅಯ್ಯೋ! ಬುದ್ದೀ! ಅದ್ಯಾಂಗೆ ತೊಂದ್ರೆ? ತಾವು ದೊಡ್ಡೋರು!"

"ಹಾಗಾದರೆ ನಿನಗೆ ತೊಂದರೆ ಇಲ್ಲವಷ್ಟೆ ?"

"ಇಲ್ಲ ನನ್ನೊಡ್ಯಾ ! ಇಲ್ಕೊಡಿ ಆ ಕಾದ್ಗಾನ"—

—ಹೀಗೆಂದು ಹೇಳಿ ಎರಡು ಕೈಗಳನ್ನೂ ನೀಡಿದಳು. ನಾನು ಕಾಗದವನ್ನು ಅವಳ ಕೈಗೆ ಕೊಟ್ಟು "ನಿನ್ನ ಹೆಸರೇನು ?" ಎಂದು ಕೇಳಿದೆ.

"ನನ್ನೆಸ್ರು ಚೆನ್ನಿ" ಎಂದು ಸ್ವಲ್ಪ ನಾಚಿಕೆಯಿಂದ ಹೇಳಿ ಹೊರಟು ಹೋದಳು.

ಸೊಗಸಾದ ಹೆಸರು ಅಂದುಕೊಂಡೆ. ಚೆನ್ನಿ ಚೆನ್ನಾಗಿ ಮಾತನಾಡಿದಳು. ಅವಳ ಮುಖದಲ್ಲಿನ ಆ ನಮ್ರಭಾವ—ಕಣ್ಣುಗಳಲ್ಲಿ ಆಕೆಯ ತಿಳಿ ಹೃದಯದ ನಿರ್ಮಲ ಛಾಯೆ—ಮಾತುಗಳಲ್ಲಿ ಹಳ್ಳಿಗಾಡಿನ ಒಂದು ವಿಧವಾದ ಲಾಲಿತ್ಯ—ಇವು ಪ್ರತಿಯೊಂದೂ ನನ್ನ ಮನಸ್ಸಿನಲ್ಲಿ ನಾಟಿದವು.

*    *    *    *

ಆ ದಿನ ಮಧ್ಯಾಹ್ನ ಊಟವಾದ ಮೇಲೆ ಸ್ವಲ್ಪ ನಿದ್ದೆಮಾಡಿದೆ. ಎಚ್ಚರವಾದಾಗ ಸುಮಾರು ನಾಲ್ಕುಗಂಟೆ ಇರಬಹುದು. ಮುಖ ತೊಳೆದುಕೊಳ್ಳುವುದಕ್ಕೆಂದು ಕೊಠಡಿಯಿಂದ ಹೊರಗೆ ಬಂದೆ. ಪುನಃ ಅದೇ ಹುಡುಗಿ, ನಾನು ಮೊದಲು ನೋಡಿದ ಸ್ಥಳದಲ್ಲೇ ಕಂಭವನ್ನು ಒರಗಿಕೊಂಡು ಕುಳಿತಿದ್ದಳು. ನಾನು ಹೊರಗೆ ಬಂದುದನ್ನು ನೋಡಿದೊಡನೆಯೇ ಚಾಚಿದ ಕಾಲುಗಳನ್ನು ಮುದುರಿಕೊಂಡು, ಏನೋ ಒಂದು ವಿಧವಾದ ಅನ್ಯಮನಸ್ಕತೆಯಿಂದ ಸೆರಗಿನ ತುದಿಯಲ್ಲಿ ದಾರದ ಎಳೆಯನ್ನು ಕೀಳಲಾರಂಭಿಸಿದಳು. ನನಗೆ ನೀರು ಬೇಕಾಗಿತ್ತು. ಅಲ್ಲಿ ಕೇಳಲು ಮತ್ತಾರೂ ಇರಲಿಲ್ಲ. ಆಗಲೆ ಒಂದು ಸಲ ಆಕೆಯೊಡನೆ ಮಾತನಾಡಿದ್ದೆನಷ್ಟೆ; ಈಗ ಅದರ ಸಲಿಗೆಯಿಂದ ಅವಳನ್ನೇ ಕುರಿತು "ಚೆನ್ನಮ್ಮಾ, ಸ್ವಲ್ಪ ನೀರು ಬೇಕಿತ್ತು—ಮುಖಾ ತೊಳೆಯೋಕೆ" ಅಂದೆ. "ಆಗ್ಲೆಇಟ್ಟಿದು ನನ್ನೊಡ್ಯಾ" ಎಂದು ಮುಗುಳ್ನಗೆ ನಗುತ್ತ ಏನೋ ಒಂದು ಸಡಗರದಿಂದ ಒಳಕ್ಕೆ ಹೋದಳು. ಚೆನ್ನಮ್ಮ ಹುಟ್ಟುತ್ತಲೇ ಮುಗುಳ್ನಗೆಯನ್ನು ತಂದಿರಬೇಕೆಂದು ತೋರಿತು. ನಾನು ನೋಡಿದಾಗಲೆಲ್ಲಾ ಆಕೆಯ ಆ ಮುಗ್ಧವಾದ ಮುಖವು ತಿಳಿನಗೆಯಿಂದ ಬೆಳಗುತ್ತಿತ್ತು. ಪಟ್ಟಣಗಳಲ್ಲಿ ಯುವತಿಯರ ಮಂದಹಾಸವನ್ನು ಅನೇಕ ಸಂದರ್ಭಗಳಲ್ಲಿ ನೋಡಿದ್ದೇನೆ. ಆದರೆ ಅದು ಸಾಧಾರಣವಾಗಿ ದೊಡ್ಡ ದೊಡ್ಡ ಮರಗಳನ್ನುರುಳಿಸಿ ಧೂಳೆಬ್ಬಿಸುವ ಬಿರುಗಾಳಿಯಂತೆ, ಮನಸ್ಸಿನಲ್ಲಿ ಗರ್ಜಿಸುವ ಅಲೆಗಳನ್ನೆಬ್ಬಿಸಿ ಅಲ್ಲೋಲ ಕಲ್ಲೋಲಮಾಡುವ ಮುಗುಳ್ನಗೆ! ಚೆನ್ನಮ್ಮನ ಮುಗುಳ್ನಗೆ ಅಂತಹುದಲ್ಲ. ಅದು ಮೃದುವಾಗಿ ಅಲ್ಲಿ ಸುಳಿದು ಇಲ್ಲಿ ಸುಳಿದು, ಚಿಗುರುಗಳಲ್ಲಿ ತೂರಿ, ಹೂ ಗೊಂಚಲನ್ನು ಹಾಯ್ದು, ಪರಿಮಳವನ್ನು ಹೊತ್ತು ತರುವ ತಂಗಾಳಿಯಂತೆ ಹೃದಯದಲ್ಲಿ ಚಿಕ್ಕ ಚಿಕ್ಕ ತರಂಗಮಾಲೆಗಳನ್ನು ಹುಟ್ಟಿ

ಸುವ ಸರಳವಾದ ಮುಗುಳ್ನಗೆ! ಬಿರುಗಾಳಿಯಲ್ಲಿ ಸಿಕ್ಕರೆ ಬರೀಧೂಳು! ಕಣ್ಣಿಗೆ, ಬಾಯಿಗೆ ಮಣ್ಣು! ಅದರಲ್ಲಿ ಸೌರಭವಿಲ್ಲ. ಈ ಹಳ್ಳಿಯ ಹುಡುಗಿಯು ನಗುವಿನಲ್ಲೋ? ಓ! ಅದು ಮಲ್ಲಿಗೆಯ ಹುವ್ವಿನ ಹಾಗೆ! ಮಲ್ಲಿಗೆಯ ಹೂವಿನದು ಎಂತಹ ಶುಭ್ರತೆ! ಎಣೆಯಿಲ್ಲದ ಪರಿಮಳ! . . . ಇಷ್ಟು ಯೋಚನೆ ಆಗಿದ್ದಾಗ ಚೆನ್ನಮ್ಮ ನೀರು ತಂದಳು. ಕೈಕಾಲು ಮುಖ ತೊಳೆದುಕೊಂಡು ಕೊಠಡಿಗೆ ಹೋಗುವುದರೊಳಗೆ ಚೆನ್ನಮ್ಮನೇ ಸ್ವಲ್ಪ ತಿಂಡಿ, ಒಂದು ಬಟ್ಟಲಲ್ಲಿ ಹಾಲು ತಂದಿಟ್ಟುಹೋದಳು. ತಿಂಡಿ ಮುಗಿಸಿಕೊಂಡು ಹಾಗೆಯೇ ಸುತ್ತಾಡಿಕೊಂಡು ಬರೋಣವೆಂದು ನನ್ನ ಕೊಳಲನ್ನೂ ಸಣ್ಣದೊಂದು "ಕ್ಯಾಮರಾ"ವನ್ನೂ ತೆಗೆದುಕೊಂಡು ಕೊಠಡಿಯನ್ನು ಬಿಟ್ಟೆ. ಹೊರಗೆ ಬಂದಾಗ ಚೆನ್ನಮ್ಮ! ಅದೇ ಸ್ಥಳದಲ್ಲೇ ಕುಳಿತಿದ್ದಳು. ನಾನು ಮನೆಯನ್ನು ಬಿಟ್ಟು ನಾಲ್ಕಾರು ಮಾರು ಬಂದೆ. ಎತ್ತಕಡೆ ಹೋಗೋಣ ಎಂದು ಯೋಚನೆಯಾಯಿತು. ಮನೆಯ ಹಿಂದೆ ಅವರ ತೋಟ ಇದೆ ಎಂದು ಕೇಳಿದ್ದುದು ಜ್ಞಾಪಕಕ್ಕೆ ಬಂದು ಅಲ್ಲಿಗೇ ಹೋಗೋಣವೆಂದು ನಿರ್ಧರಿಸಿದೆ. ಆದರೆ ದಾರಿ ಗೊತ್ತಿಲ್ಲ. ಏನು ಮಾಡುವುದು ಎಂದು ಯೋಚಿಸುತ್ತ ಚೆನ್ನಮ್ಮನನ್ನೇ ಕೇಳಿಬಿಡುವುದು ಎಂದುಕೊಂಡು ತಿರುಗಿ "ಏನಮ್ಮಾ, ನಿಮ್ಮ ತೋಟ ಇದೆಯಂತಲ್ಲ, ಅದನ್ನ ನೋಡೋಣಾಂತ ಇದ್ದೇನೆ. ದಾರಿಯಾವುದು ಹೇಳ್ತೀಯಾ?" ಎಂದು ಕೇಳಿದೆ. ಆಕೆ "ಆಗಲಿ ನನ್ನೊಡ್ಯಾ" ಎಂದು ಎದ್ದುಬಂದು ನನ್ನನ್ನು ಮನೆಯ ಹಿಂಭಾಗಕ್ಕೆ ಕರೆದುಕೊಂಡುಹೋಗಿ, ಒಂದು ಕಾಲು ದಾರಿಯನ್ನು ತೋರಿಸಿ "ಇದೇ ನನ್ನೊಡ್ಯಾ ಹಾದಿ ನಮ್ತೋಟಕ್ಕೆ" ಎಂದು ಹೇಳಿದಳು. "ಸರಿ, ಇನ್ನು ಹೋಗುತ್ತೇನೆ" ಎಂದು ಹೇಳಿ ಹೊರಟೆ. ಆ ಕಾಲುಹಾದಿ ಹಿತ್ತಲ ತರಕಾರಿ ತೋಟವನ್ನು ಬಳಸಿಕೊಂಡು ದೊಡ್ಡ ತೋಟಕ್ಕೆ ಹೋಗಿತ್ತು. ಆ ದಾರಿಯಲ್ಲಿ ಸುಮಾರು ಇಪ್ಪತ್ತು ಮಾರು ಹೋಗಿದ್ದೆ. ಆಗ ಗಾಳಿ ಬಂದು ನಾನು ಹೊದೆದುಕೊಂಡಿದ್ದ ಧೋತ್ರದ ತುದಿ ತರಕಾರಿ ತೋಟದ ಬೇಲಿಗೆ ಸಿಕ್ಕಿಕೊಂಡಿತು. ಬಿಡಿಸಿಕೊಳ್ಳುವುದಕ್ಕಾಗಿ ಹಿಂತಿರುಗಿದೆ. ಚೆನ್ನಮ್ಮ, ನಾನು ಅವಳನ್ನು ಎಲ್ಲಿ ಬಿಟ್ಟಿದ್ದೆನೋ ಅಲ್ಲೇ ನಿಂತಿದ್ದಳು. ನಾನು ದಾರಿತಪ್ಪೇನೆಂಬ ಶಂಕೆಯೇನೋ ಅವಳಿಗೆ ಅಂದುಕೊಂಡೆ.

ಇನ್ನು ಸುಮಾರು ನೂರುಗಜ ಹೋಗುವುದರಲ್ಲಿ ತೋಟ ಸಿಕ್ಕಿತು.

ಅದು ಬಹಳ ಸೊಗಸಾದ ತೋಟ. ವಿಶೇಷವಾಗಿದ್ದುದು ಅಡಿಕೆ-ತೆಂಗು. ಇನ್ನು ಕೆಲವು ಹಣ್ಣು ಹಂಪಲು ಗಿಡಗಳೂ ಇದ್ದವು. ಸ್ವಭಾವತಃ ರಮ್ಯವಾದ ಆ ತೋಟದ ಸೊಬಗು ಅಂದು ಸಾಯಂಕಾಲದ ಸೂರ್ಯನ ಭಂಗಾರದ ಕಾಂತಿಯಲ್ಲಿ ಸೂರ್ಕಡಿಯಾಗಿತ್ತು. ತೋಟವನ್ನು ಹೊಕ್ಕು ಹತ್ತಾರು ಹೆಜ್ಜೆ ಹೋಗುವುದರಲ್ಲಿ ಒಂದು ವಿಶಾಲವಾದ ಬಾವಿ ಸಿಕ್ಕಿತು. ಅದು ಯಾತದ ಬಾವಿ. ಒಂದು ಪಕ್ಕದಲ್ಲಿ ನೀರಿನವರೆಗೂ ಇಳಿದು ಹೋಗುವುದಕ್ಕೆ ಮೆಟ್ಟಲುಗಳಿದ್ದವು. ಬಾವಿಯ ಸುತ್ತಲೂ ಸುಮಾರು ಎರಡು ಅಡಿ ಎತ್ತರ ಕಲ್ಲಿನ ಗೋಡೆ. ನಾನು ಹೋಗಿ ಆ ಗೋಡೆಯ ಮೇಲೆ ಕುಳಿತುಕೊಂಡು ತೋಟದ ಸೊಬಗನ್ನು ಕುಡಿಯಲಾರಂಭಿಸಿದೆ.

೨

ಸ್ವಲ್ಪಕಾಲ ನನ್ನ ಮನಸ್ಸು ಆ ತೋಟದ ಸೊಬಗಿನ ಪಾನದಿಂದ ಮುದವೇರಿ ಯಾವುದೋ ವರ್ಣಿಸಲಾಗದ ಸುಖವನ್ನನುಭವಿಸಿತು. ತೋಟದ ತಂಪು ಗಾಳಿಯಲ್ಲಿ ಬೆರೆತು ಹಾಯ್ದು ಹಾಯ್ದು ಬರುತ್ತಿತ್ತು. ಬಾವಿಯ ಸುತ್ತಲೂ ತರತರದ ಹೂವಿನ ಗಿಡಗಳಿದ್ದವು. ಅವುಗಳ ಪರಿಮಳವೆಲ್ಲಾ ತಂಗಾಳಿಯಲ್ಲಿ ಸೂರೆಯಾಗುತ್ತಿತ್ತು. ನಾನಾ ಜಾತಿಯ ಪಕ್ಷಿಗಳ ಕಂಠ ಆಕಾಶದಲ್ಲಿ, ಗಿಡಗಳಲ್ಲಿ, ಮರಗಳಲ್ಲಿ ಎಲ್ಲೆಲ್ಲಿಯೂ ಕೇಳಿ ಬರುತ್ತಿತ್ತು. ನನ್ನ ಹೃದಯವು ಪಕ್ಷಿಗಳೊಡನೆ ಪಕ್ಷಿಯಾಯಿತು. ಹೂಗಳೊಡನೆ ಹೂವಾಯಿತು. ಕವಿಗಳು ಕಾಣದ ಸ್ವರ್ಗವನ್ನು ಏಕೆ ವರ್ಣಿಸುತ್ತಾರೆಯೋ ಅನ್ನಿಸಿತು. ಎಲ್ಲಿ ಸುಖವೋ ಅಲ್ಲೇ ಸ್ವರ್ಗ! . . . ಹೃದಯವು ಆನಂದದಿಂದ ತುಂಬಿ ಹರಿಯಿತು. ಅದರ ಭರದಲ್ಲಿ ಕೊಳಲನ್ನು ನುಡಿಸಲಾರಂಭಿಸಿದೆ. ಕೊಳಲಿನ ಒಂದು ಸ್ವರವು ನೂರು ಸ್ವರವಾಗಿ ತೋಟವನ್ನೆಲ್ಲಾ ತುಂಬಿತು. ನನ್ನ ಕೊಳಲಿನ ಗಾನಕ್ಕೆ ನಾನೇ ಉಬ್ಬಿಹೋದೆ. ಒಂದೆರಡು ಕೀರ್ತನೆಗಳನ್ನು ಕೊಳಲಲ್ಲಿ ನುಡಿಸಿ ಆ ಮೇಲೆ ಬಾಯಲ್ಲಿ ಹೇಳುವುದಕ್ಕಾರಂಭಿಸಿದೆ. ತೋಟದಲ್ಲೆಲ್ಲಾ ನಾನೊಬ್ಬನೇ ಎಂಬ ಧೈರ್ಯದಿಂದ ಬಾಯಿಗೆ ಬಂದಂತೆ ಹಾಡತೊಡಗಿದೆ. ಇದ್ದಕ್ಕಿದ್ದ ಹಾಗೆಯೇ ನನ್ನ ಹಿಂದೆ "ಗುಳು ಗುಳು" ಎಂಬ ಶಬ್ದವಾಯಿತು. ನಾನು ತಟ್ಟನೆ ಹಾಡುವುದನ್ನು ನಿಲ್ಲಿಸಿ ತಿರುಗಿ ನೋಡಿದೆ. ನೋಡಿದರೆ ಆ ಹುಡುಗಿ ಚೆನ್ನಿ! ಮೆಟ್ಟಲುಗಳ ಮೂಲಕ ಕೆಳಗೆ ನೀರಿಗಿಳಿದು, ಕೊಡದಲ್ಲಿ ನೀರು ತುಂಬಿ

ತ್ತಿದ್ದಳು. ನಾನು ತಿರುಗಿ ನೋಡಿದಾಗ ಅವಳು ತಲೆಯನ್ನೆತ್ತಿ ನನ್ನ ಕಡೆ ನೋಡುತ್ತಿದ್ದಳು. ನನಗೆ ಬಹಳ ನಾಚಿಕೆಯಾಯಿತು. ನಾನು ಪಟ್ಟಣದ ನಾಗರಿಕನೆಂದು ಇವರು ಗೌರವವನ್ನಿಟ್ಟುಕೊಂಡಿದ್ದಕ್ಕೂ, ಈಗ ನಾನು ಗೊಲ್ಲರ ಹುಡುಗನಂತೆ ಕೊಳಲೂದುತ್ತ ಬಾಯಿಗೆ ಬಂದಂತೆ ಅರಚುತ್ತಿದ್ದುದಕ್ಕೂ ಸರಿಹೋಯ್ತು!—ಅಂದುಕೊಂಡೆ. ನಾನು ಮೆಟ್ಟಲುಗಳ ಕಡೆಗೆ ಬೆನ್ನು ತಿರುಗಿಸಿಕೊಂಡು ಕುಳಿತಿದ್ದುದರಿಂದ ಆಕೆ ಬಂದದ್ದು ತಿಳಿಯಲಿಲ್ಲ. ನನ್ನ ಸಂಗೀತದ ಭರದಲ್ಲಿ ಆಕೆಯ ಕೈಬಳೆಗಳ ಸದ್ದಾಗಲಿ, ಕಾಲಂದುಗೆಯ ಸದ್ದಾಗಲಿ ಕೇಳಿಸಲಿಲ್ಲ. ಅಂತು ಆಗಿನ ನನ್ನ ಸ್ಥಿತಿ ಬಹಳ ನಾಚಿಕೆಗೆ ಕಾರಣವಾಯಿತು. ಒಂದು ಕ್ಷಣ ನಾನೇ "ಏನಾಯ್ತು ಬಿಡೋ!" ಅಂದುಕೊಂಡೆ. ಆದರೂ ಮನಸ್ಸು ಸಮಾಧಾನವಾಗಲೊಲ್ಲದು. ನಗು ಬರುವ ಹಾಗಾಯಿತು. ಕೊಳಲನ್ನು ಪಕ್ಕದಲ್ಲಿಟ್ಟು "ಕ್ಯಾಮರ"ವನ್ನು ಕೈಗೆ ತೆಗೆದುಕೊಂಡು ಅದನ್ನು ನೋಡುವವನಂತೆ ನಟಿಸಿದೆ. ಆಕೆ ಕೊಡದಲ್ಲಿ ನೀರು ತುಂಬಿಕೊಂಡು ಮೆಟ್ಟಲುಗಳನ್ನು ಒಂದೊಂದಾಗಿ ಹತ್ತಿಬಂದಂತೆ ಬೋಧೆಯಾಯಿತು. ಮೆಟ್ಟಲುಗಳನ್ನೆಲ್ಲಾ ಹತ್ತಿದ ಮೇಲೆ ಆಕೆಯ ಕಾಲು ಸಪ್ಪಳ ಕೇಳಿಸಲಿಲ್ಲ. ನನಗೆ ಆಕೆ ಎಷ್ಟು ಹೊತ್ತಿಗೆ ಹೊರಟು ಹೋಗುತ್ತಾಳೋ ಅನ್ನಿಸಿತು. ಕಾಲು ಸಪ್ಪಳದ ಬದಲು ಕೈಬಳೆಗಳ ಸದ್ದು ಕೇಳಿಸಿತು. ಪುನಃ ಆಕೆಯ ಮುಖವನ್ನು ನೋಡುವುದಕ್ಕೆ ನಾಚಿಕೆಯಾಯಿತು! ಆದರೂ ತಿರುಗಿ ನೋಡಿದೆ! ಆಕೆ ಚೆನ್ನಾಗಿ ಬೆಳಗಿದ್ದ ಎರಡು ಹಿತ್ತಾಳೆ ಕೊಡಗಳಲ್ಲಿ ನೀರು ತುಂಬಿಕೊಂಡು, ಮೆಟ್ಟಲುಗಳನ್ನೆಲ್ಲಾ ಹತ್ತಿಬಂದು, ಅವುಗಳನ್ನು ಕೊಳದ ಸುತ್ತಲೂ ಇದ್ದ ಕಟ್ಟೆಯ ಮೇಲೆ ಇಟ್ಟಿದ್ದಳು. ಈ ಸಮಯದಲ್ಲಿಯೇ ನಾನು ಅವಳನ್ನು ಪುನಃ ನೋಡಿದ್ದು. ನನ್ನ ವಿಚಿತ್ರವಾದ ಸಂಗೀತದಿಂದ ಉಂಟಾಗಿದ್ದ ನಗು ಇನ್ನೂ ಆಕೆಯ ಮುಖದ ಮೇಲೆ ಸುಳಿಯುತ್ತಿತ್ತು. ನನಗೆ ಬಹಳ ನಾಚಿಕೆಯಾಯಿತು. ಮುಖವನ್ನು ತಿರುಗಿಸಿಕೊಂಡು, ಕುಳಿತಿದ್ದವನು ಎದ್ದೆ. ಆಕೆ ಏನೋ ಮಾತನಾಡಿದ ಹಾಗಾಯಿತು. ನನ್ನ ಮನಸ್ಸಿನ ಗಲಭೆಯಲ್ಲಿ ಅದು ಏನು ಎಂದು ತಿಳಿಯಲಿಲ್ಲ. ಪುನಃ ಆಕೆಯ ಕಡೆಗೆ ತಿರುಗಿ "ಏನಮ್ಮಾ" ಎಂದು ಕೇಳಿದೆ. ಆಕೆ "ಪದಾ ಹೇಳೋದ್ಯಾಕ್ಬಿಟ್ರಿ ನನ್ನೊಡ್ಯಾ?" ಎಂದು ಕೇಳಿದಳು. ಆಕೆಯ ಈ ಪ್ರಶ್ನೆಯಿಂದ ನನ್ನ ಮನಸ್ಸಿನಲ್ಲಾದ ಕಳವಳವೂ ಅವಮಾನವೂ ದೇವರಿಗೇ ಗೊತ್ತು! ಏನು

ಹೇಳಬೇಕೋ ಕೂಡಲೆ ಗೊತ್ತಾಗದೆ "ಆ-ಊ" ಎಂದು ಉಪಚಾರಕ್ಕೆ ಹಲ್ಲು ಕಿರಿದು ಆಮೇಲೆ "ಮುಗಿದುಹೋಯ್ತಮ್ಮಾ" ಎಂದೆ. ಆಕೆ ಕೇಳಿದ ಪ್ರಶ್ನೆ ಅಪಹಾಸ್ಯವಾಗಿ ತೋರಿತಾದರೂ ಅದರಿಂದ ನನಗೆ ಸಿಟ್ಟು ಬರಲಿಲ್ಲ. ಸಿಟ್ಟು ಏಕೆ ಬರಬೇಕು! ನಾನು ಮಾಡಿದ್ದು ಬೆಪ್ಪು ಕೆಲಸ! ನನ್ನ ಆಗಿನ ಮನಸ್ಸಿನ ಸ್ಥಿತಿಯಲ್ಲಿ ಅದು ಅಪಹಾಸ್ಯವಾಗಿ ತೋರಿರಬೇಕೇ ಹೊರತು, ನಿಜವಾಗಿಯೂ ಹಸನ್ಮುಖಿಯಾದ ಈ ಹಳ್ಳಿಯ ಮುಗ್ಧೆಗೆ ನನ್ನನ್ನು ಹಾಸ್ಯಮಾಡುವ ಅಭಿಪ್ರಾಯವಿರಲಾರದು ಎಂದು ತೋರಿತು. ಹೇಗೋ ಆದದ್ದು ಆಗಿಹೋಯಿತು, ಇನ್ನು ಈ ಜಾಗ ಬಿಡೋಣ ಅಂದುಕೊಂಡು, ಕೊಳಲನ್ನೂ ಕ್ಯಾಮರವನ್ನೂ ಕೈಗೆ ತೆಗೆದುಕೊಂಡು ಒಂದೆರಡು ಹೆಜ್ಜೆ ಮುಂದಕ್ಕಿಟ್ಟೆ. ಅಷ್ಟರಲ್ಲೇ "ನನ್ನೊಡ್ಯಾ" ಎಂದು ಕರೆದಳು. "ಪುನಃ ಇದೇನು ನನ್ನೊಡ್ಯಾ" ಎಂದು ತಿರುಗಿದೆ. ಆಕೆ ತುಂಬಿದ ಒಂದು ಕೊಡವನ್ನು ತಲೆಯಮೇಲೆ ಎತ್ತಿ ಇಟ್ಟುಕೊಳ್ಳುತ್ತಾ ಇದ್ದಳು. ಇನ್ನೊಂದು ಕಟ್ಟೆಯ ಮೇಲೆಯೇ ಇತ್ತು. ನಾನು ತಿರುಗಿದ್ದನ್ನು ನೋಡಿ ಆ ಬಿಂದಿಗೆಯನ್ನು ತೋರಿಸುತ್ತಾ "ಬುದ್ದೀ, ಈ ಬಿಂದಿಗೇನ ಒಸಿ ಎತ್ತಿಕೊಡ್ತೀರಾ?" ಎಂದು ನಾಚಿಕೆಯಿಂದಲೂ ಸ್ವಲ್ಪ ಸಂಕೋಚದಿಂದಲೂ ಕೇಳಿದಳು. ನಾನು "ಓ, ಅಗತ್ಯವಾಗಿ" ಎಂದು ಹೇಳಿ, ಕೈಲಿದ್ದ ಕ್ಯಾಮರಾವನ್ನೂ ಕೊಳಲನ್ನೂ ಕೆಳಗಿಟ್ಟು, ಆ ಬಿಂದಿಗೆಯನ್ನು ಎತ್ತಿ ಅವಳ ಸೊಂಟದ ಮೇಲಿಟ್ಟೆ. ನಾನು ಇಷ್ಟು ಮಾಡಿದ್ದು ಅವಳಿಗೆ ಬಹಳ ಅಗಾಧವಾಗಿ ಕಂಡಿರಬೇಕು. ಅವಳ ಮುಖದ ಮೇಲೆ ಬಹಳ ಸಂತೋಷ ಕಾಣಬಂತು. ಮನೆಯ ಹಾದಿಯನ್ನು ಹಿಡಿದು ಮೆಲ್ಲಗೆ ನಾಲ್ಕಾರು ಹೆಜ್ಜೆ ಹೋದಳು. ತುಂಬಿದ ಕೊಡಗಳ ಭಾರಕ್ಕೆ ಬಳುಕುತ್ತ ಹೋಗುತ್ತಿದ್ದ ಆ ತುಂಬು ಯೌವನವು ಆದಿನ ಸಾಯಂಕಾಲದ ಸೂರ್ಯನ ಭಂಗಾರದ ಬೆಳಕಿನಲ್ಲಿ ಅತ್ಯಂತ ಮನೋಹರವಾಗಿ ಕಂಡಿತು. ಕೂಡಲೆ ನನ್ನ ಮನಸ್ಸಿನಲ್ಲಿ ಆಕೆಯ ಆ ನಿಲುವಿನಲ್ಲಿ ಒಂದು ಫೋಟೋ ತೆಗೆಯಬೇಕೆಂದು ಆಸೆಯಾಯಿತು. ಕ್ಯಾಮರಾವನ್ನು ಸಿದ್ಧಮಾಡಿಕೊಂಡು, ಹುಡುಗಿ ಏನು ತಿಳಿದುಕೊಂಡಾಳು ಎಂಬ ಯೋಚನೆ ಸಹ ಇಲ್ಲದೆ "ಚೆನ್ನಮ್ಮಾ" ಎಂದು ಕರೆದೆ. ಆಕೆ ಭಾರದ ಜೋಕಿನಲ್ಲಿಯೇ ಮೆಲ್ಲಗೆ ತಿರುಗಿ "ಕರೆದರಾ ನನ್ನೊಡ್ಯಾ?" ಎಂದು ಕೇಳಿದಳು. ನಾನು "ಹೂ" ಎಂದು ಅವಳ ಸಮೀಪಕ್ಕೆ ಹೋಗಿ "ತಾಯೀ, ನೀನು ಒಂದು

ಕ್ಷಣ ಹಾಗೇ ನಿಂತಿರುವೆಯಾ!" ಎಂದು ಕೇಳಿದೆ. ಅವಳಿಗೆ ಸ್ವಲ್ಪ ಆಶ್ಚರ್ಯವಾಗಿರಬೇಕು. ಮುಖದಲ್ಲಿ ಅದರ ಚಿಹ್ನೆಯನ್ನು ತೋರುತ್ತ, ಹೂ ಬಿಸಿಲಿಗೆ ಎದುರಾಗಿ ಬಳುಕಿ ನಿಂತಳು. ಅವಳ ಮುಖದ ಮೇಲೆ ಚ್ಯುತಿಯೇ ಇಲ್ಲದೆ ಆ ಎಳೆನಗು, ಸ್ವಲ್ಪದರಲ್ಲಿ ಮರೆಯಾಗುವ್ರದರಲ್ಲಿದ್ದ ಚಿನ್ನದ ಕಿರಣಗಳಲ್ಲಿ ಬಹಳ ಸುಖವಾಗಿ ಬೆರೆಯುತ್ತಿತ್ತು. ನಾನು ಫೋಟೋ ತೆಗೆದು "ಇನ್ನು ನೀನು ಹೊರಡಮ್ಮಾ" ಎಂದೆ. ಆಕೆ ಕುತೂಹಲದಿಂದ "ಅದೇನಮ್ಮಾ ಡಿದ್ರಿ ಬುದ್ದೀ?" ಎಂದು ಕೇಳಿದಳು. ಆಕೆಗೆ ತಿಳಿಯುವ ಹಾಗೆ ಹೇಳುವ್ರದು ಹೇಗೆ? "ನಾಳೆ ಹೇಳುತ್ತೇನೆ" ಎಂದೆ. ಆಕೆ ತಿರುಗಿ ನಿಧಾನವಾಗಿ ಮನೆಯ ಕಡೆ ನಡೆದು ಹೋದಳು.

೪

ಆ ರಾತ್ರೆ ಊಟವಾದ ಮೇಲೆ ಕೊಠಡಿಗೆ ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡೆ. ಬೇಗ ನಿದ್ದೆ ಬರಲಿಲ್ಲ. ಸಾಯಂಕಾಲ ತೋಟದಲ್ಲಿ ನಡೆದ ವಿಷಯ ಇನ್ನೂ ಮನಸ್ಸಿನಲ್ಲಿ ಇತ್ತು. ನನ್ನಷ್ಟಕ್ಕೆ ನಾನೇ ನಕ್ಕು—ಲಕ್ಷ್ಮಿಗೆ ಈ ವಿಷಯ ಹೇಳಿದರೆ ಏನಂತಾಳೋ! ಎಷ್ಟು ನಗುತ್ತಾಳೋ!—ಅಂದುಕೊಂಡೆ. ನನ್ನ ನಗು ಇನ್ನೂ ಹೆಚ್ಚಿತು.

* * * *

ಹಿಂದಿನ ರಾತ್ರೆ ನಿದ್ದೆ ಮಾಡಿದಾಗ ಬಹಳ ಹೊತ್ತಾಗಿತ್ತೆಂದು ತೋರುತ್ತೆ. ಬೆಳಿಗ್ಗೆ ಎದ್ದಾಗ ಎಂಟು ಗಂಟೆಯಾಗಿ ಹೋಗಿತ್ತು. ಆದಷ್ಟು ಬೇಗ ಮುಖ ತೊಳೆದುಕೊಂಡು, ತಿಂಡಿತೀರ್ಥ ಮುಗಿಸಿಕೊಂಡು, ಮರಡಿ ಬೆಟ್ಟಕ್ಕೆ ಹೊರಡಲು ಸಿದ್ಧವಾದೆ. ಯಜಮಾನರು ಒಬ್ಬ ಆಳನ್ನು ಗೊತ್ತು ಮಾಡಿಕೊಟ್ಟರು. ಅವನ ಕೈಲಿ ಬೇಕಾದ ಸಲಕರಣೆಗಳನ್ನೆಲ್ಲಾ ಹೊರಿಸಿಕೊಂಡು ಹೊರಟೆ. ಮರಡಿ ಬೆಟ್ಟದಲ್ಲಿ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ಹಿಂತಿರುಗುವ ಹೊತ್ತಿಗೆ ಸುಮಾರು ಹನ್ನೆರಡು ಗಂಟೆಯಾಗಿರಬಹುದು. ಹಿಂದಿರುಗಿ ಬರುತ್ತ ಕಾಲುಹಾದಿಗೆ ಸ್ವಲ್ಪ ದೂರವಾಗಿ ಹಸುರಿನಲ್ಲಿ ದನಕರುಗಳು ಮೇಯುತ್ತಿದ್ದುವು. ಅಲ್ಲಲ್ಲಿ ರೈತರು ಗದ್ದೆಗಳಲ್ಲಿ ಕೆಲಸಮಾಡುತ್ತಿದ್ದರು. ಇದಕ್ಕಿದ್ದ ಹಾಗೆಯೇ ಸ್ವಲ್ಪ ದೂರದಲ್ಲಿ ಗೊಲ್ಲರ ಹುಡುಗನೊಬ್ಬನು ಲಾವಣಿ ಹೇಳುವ್ರದಕ್ಕಾರಂಭಿಸಿದ. ಅವನಿಗೆ ಯಾರದ್ದೇನು ಹೆದರಿಕೆ! ಜೋರಾಗಿ ಒಲು ಜೋಕಿನ ಮೇಲೆ ಪ್ರಾರಂಭಿಸಿದ. ಬಹಳ ತಮಾಷೆಯಾ

ಗಿತ್ತು. ಸ್ವಲ್ಪಹೊತ್ತು ನಿಂತು ಕೇಳೋಣವೆನ್ನಿಸಿತು. ಆದರೆ ಜೊತೆಯಲ್ಲಿ ಆಳು ಇದ್ದ. ನಗುವನೇನೋ ಎಂದು ಸಂಕೋಚ. ಅಲ್ಲದೆ ಹಿಂದಿನ ದಿನದ ಸಾಯಂಕಾಲ ಜ್ಞಾಪಕಕ್ಕೆ ಬಂತು. ನಿಲ್ಲಲಿಲ್ಲ. ಹಾಗೆಯೇ ಚೆನ್ನಮ್ಮನ ಜ್ಞಾಪಕವಾಯಿತು. ಆ ಹಳ್ಳಿಗಾತಿಯ ಸ್ವಾಭಾವಿಕವಾದ ಎಳೆನಗು ನನ್ನ ಕಣ್ಣ ಮುಂದೆ ಕುಣಿದಂತಾಯಿತು. ಥಳಥಳಿಸುವ ತುಂಬಿದ ಬಿಂದಿಗೆಗಳನ್ನು ಹೊತ್ತು, ಅವುಗಳ ಭಾರಕ್ಕೆ ಬಳುಕಿ ನಿಂದ ಅವಳ ಆ ಒಯ್ಯಾರದ ನಿಲುವು ಕಣ್ಣಿಗೆ ಒತ್ತಿದಂತಾಯಿತು. ಚೆನ್ನಮ್ಮ ಮನೆಯ ಯಜಮಾನನ ಮಗಳಿರ ಬಹುದೆಂದು ಊಹಿಸಿದ್ದೆನೇ ಹೊರತು ನಿಜವಾದ ವಿಷಯ ಗೊತ್ತಿರಲಿಲ್ಲ. ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಆಳನ್ನು ಕುರಿತು—

"ನಿಮ್ಮ ಯಜಮಾನರ ಮನೆಯಲ್ಲಿರುವ ಆ ಹೆಣ್ಣುಮಗಳು ಯಾರಯ್ಯಾ ?" ಎಂದು ಕೇಳಿದೆ.

ಆಳು ನಿಂತು, ತಿರುಗಿ ನನ್ನನ್ನು ನೋಡುತ್ತ "ಯಾವ ಹೆಣ್ಮಗಳು ಬುದ್ಧೀ" ಎಂದು ಕೇಳಿದ. ನಾನು ಯಾವಾಕೆಯನ್ನು ಉದ್ದೇಶಿಸಿ ಕೇಳಿ ದೆನೋ ಅದು ಅವನಿಗೆ ಗೊತ್ತಾಗಲಿಲ್ಲ. ನಾನು "ಆ ಚೆನ್ನಮ್ಮಾ ಅಂತಿ ದ್ದಾಳಲ್ಲ ಆಕೆ" ಎಂದೆ. ಆಳು ನನ್ನ ಕಡೆಯೇ ನೋಡುತ್ತಿದ್ದವನು, ನನ್ನ ಪ್ರಶ್ನೆಯನ್ನು ಕೇಳಿ ನಕ್ಕು, ಮುಖವನ್ನು ತಿರುಗಿಸಿಕೊಂಡು "ಯಾಕೆ ಬುದ್ಧೀ" ಎಂದು ಕೇಳಿದ! ನನಗೆ ಬಹಳ ಅವಮಾನವಾದ ಹಾಗಾ ಯಿತು. ನಾಚಿಕೆಯಾಯಿತು. ಈ ಆಳು ನನ್ನ ಪ್ರಶ್ನೆಯಲ್ಲಿ ಏನೋ ದುರಭಿ ಪ್ರಾಯವನ್ನು ನೋಡುವ ಹಾಗಾಯಿತಲ್ಲಾ—ಎಂದು ನನ್ನ ಮನಸ್ಸಿನಲ್ಲಿ ಕ್ಷಣಕಾಲ ಬಹಳ ಗಲಿಬಿಲಿಯಾಯಿತು. ಲಕ್ಷ್ಮಿಯನ್ನು ಬಿಟ್ಟು ನನ್ನ ಜೀವವೇ ಇಲ್ಲವೆಂದು ಈ ಮುಠ್ಠಾಳನು ತಿಳಿಯುವುದು ಹೇಗೆ? ಅವ ನೇನೋ ವ್ಯಂಗ್ಯವಾಗಿ ನಕ್ಕು "ಯಾಕೆ ಬುದ್ಧೀ?" ಎಂದು ಕೇಳಿಬಿಟ್ಟ. ನಾನು,

"ಯಾಕೂ ಇಲ್ಲವಯ್ಯ—ಸುಮ್ಮನೆ ಕೇಳಿದೆ—ಕೇಳಬಾರದಾಗಿತ್ತೆ?" ಎಂದೆ.

"ಅಯ್ಯೋ! ಅದಕ್ಕೇನ್ಬುದ್ಧೀ—ಪರವಾ ಇಲ್ಲ. ಆಕೆ ಯಜಮಾನ್ರ ಮಗಳು" ಅಂದ.

ಇನ್ನೊಂದು ಪ್ರಶ್ನೆ ನಾಲಗೆ ತುದಿಯವರೆಗೆ ಬಂದಿತ್ತು; ಆದರೆ ತಡೆದೆ! "ಯಾರು" ಎಂದು ಕೇಳಿದ್ದಕ್ಕೇ ನಕ್ಕವನು ಇನ್ನು "ಮದುವೆಯಾಗಿ

ದೆಯೋ ?'' ಎಂದು ಕೇಳಿದರೆ ಇನ್ನೇನು ತಿಳಿದುಕೊಳ್ಳುವನೋ ಎಂದು ಭಯವಾಯಿತು. ಸುಮ್ಮನಾದೆ.

*　　*　　*　　*

ಮನೆಗೆ ಬಂದವನೇ ಸ್ನಾನಮಾಡಿ ಊಟವನ್ನು ಮುಗಿಸಿಕೊಂಡು, ಹಿಂದಿನ ಸಾಯಂಕಾಲ ತೆಗೆದಿದ್ದ ಚೆನ್ನಮ್ಮನ ಫೋಟೋವಿನ ಮೂರು-ನಾಲ್ಕು ಅಚ್ಚು ತೆಗೆದೆ. ಚಿತ್ರ ಬಹಳ ಚೆನ್ನಾಗಿ ಬಂದಿತು. ಮನೆಯವರೆಲ್ಲಾ ಅದನ್ನು ನೋಡಿ ಬಹಳ ಸಂತೋಷಪಟ್ಟರು.

*　　*　　*　　*

ಮಧ್ಯಾಹ್ನ ಊಟ ಹೊತ್ತಾಗಿತ್ತು. ಆದ್ದರಿಂದ ರಾತ್ರೆ ಹಸಿವು ತೋರಲಿಲ್ಲ. ರಾತ್ರೆ ಊಟಮಾಡುವುದಿಲ್ಲವೆಂದು ಮನೆಯವರಿಗೆ ತಿಳಿಸಿಬಿಟ್ಟೆ. ನಿದ್ರೆಯೂ ಬೇಗ ಬರುವಂತೆ ತೋರಲಿಲ್ಲ. ಏನುಮಾಡುವುದಕ್ಕೂ ತೋಚದೆ ಸ್ವಲ್ಪ ದೂರ ಸುತ್ತಾಡಿಕೊಂಡು ಬರೋಣವೆಂದು ಹೊರಟೆ; ಪುನಃ ಕೊಠಡಿಗೆ ಬಂದಾಗ ಒಂಭತ್ತುಗಂಟೆಯಾಗಿ ಹೋಗಿತ್ತು. ಇನ್ನೂ ನಿದ್ದೆ ದೂರ ಇದ್ದಂತೆ ತೋರಿತು. ದೀಪಹಚ್ಚಿ, ಹಾಸಿಗೆ ಹಾಸಿ, ಅದರ ಮೇಲೆ ಮಲಗಿಕೊಂಡು ಯಾವುದೋ ನಾವೆಲನ್ನು ತೆಗೆದು ಓದತೊಡಗಿದೆ. ಸುಮಾರು ಹತ್ತುನಿಮಿಷ ಓದಿರಬಹುದು. ಆಗ ಕೊಠಡಿಯ ಬಾಗಿಲು ಏನೋ ಸದ್ದಾದ ಹಾಗಾಯಿತು. ಗಾಳಿಯೇನೋ ಅಂದುಕೊಂಡು ಪುನಃ ಪುಸ್ತಕವನ್ನು ನೋಡತೊಡಗಿದೆ. ಪುನಃ ಸದ್ದಾಯಿತು. ಈ ಬಾರಿ ಮೆಲ್ಲಗೆ ತಟ್ಟಿದ ಹಾಗಾಯಿತು. ಮಲಗಿದ್ದ ಹಾಗೆಯೇ "ಯಾರಪ್ಪಾ ಅದು ?'' ಎಂದು ಕೇಳಿದೆ. ಉತ್ತರವಿಲ್ಲ. ಒಂದು ಕ್ಷಣಬಿಟ್ಟು ಪುನಃ ಯಾರೋ ಮೆಲ್ಲಗೆ ತಟ್ಟಿದ ಹಾಗಾಯಿತು. ಎದ್ದು ಕುಳಿತು "ಯಾರದು ?'' ಎಂದು ಕೇಳಿದೆ. ಕೈಬಳೆಗಳ ಸದ್ದಾಯಿತು ! ಜೊತೆಗೆ ಕ್ಷೀಣಸ್ವರದಲ್ಲಿ "ನಾನು ಚೆನ್ನಿ'' ಎಂದು ಉತ್ತರಬಂತು ! ನನಗೆ ಆಶ್ಚರ್ಯವಾಯಿತು. ಇಷ್ಟು ಹೊತ್ತಿನಲ್ಲಿ ಇವಳಿಗೆ ನನ್ನಲ್ಲಿ ಏನು ಕೆಲಸ ? . . . ಏನಾದರೂ ಇರಲಿ ವಿಚಾರಿಸೋಣವೆಂದು ಎದ್ದು ಬಾಗಿಲನ್ನು ತೆಗೆದು ಹೊರಗೆ ಮುಖಹಾಕಿ "ಏನಮ್ಮಾ'' ಎಂದು ಕೇಳಿದೆ. ನನ್ನ ಕೊಠಡಿಯ ಬೆಳಕು ಸ್ವಲ್ಪವಾಗಿ ಅವಳ ದೇಹದ ಮೇಲೆ ಬೀಳುತ್ತಿತ್ತು. ಅವಳ ಕೈಯಲ್ಲಿ ಒಂದು ತಟ್ಟೆ, ಅದರಲ್ಲಿ ನಾಲ್ಕೈದು ಬಾಳೆಹಣ್ಣುಗಳು, ಸ್ವಲ ಸಕ್ಕರೆ, ಒಂದು ಬಟ್ಟಲಲ್ಲಿ ಸ್ವಲ್ಪ ಹಾಲು ಇಷ್ಟು ಇತ್ತು. ನಾನು "ಏನಮ್ಮಾ'' ಎಂದು ಕೇಳಿದ್ದಕ್ಕೆ

ಆಕೆ "ಬುದ್ಧೀ, ತಮ್ಗ ಈಗ ಊಟ ಇಲ್ಲ; ಅದಕ್ಕೇ ಇದನ್ತಂದೆ ನನ್ಸೊಡ್ತ್ಯಾ" ಎಂದಳು. ನನಗೆ ಆಗ ಸ್ವಲ್ಪ ಸ್ವಲ್ಪವಾಗಿ ಹಸಿವು ತೋರು ವುದಕ್ಕಾರಂಭವಾಗಿತ್ತು. "ಬಹಳ ಸಂತೋಷವಮ್ಮ" ಎಂದು ಹೇಳಿ ಆಕೆಯು ಕೈಯಿಂದ ಆ ತಟ್ಟೆಯನ್ನು ತೆಗೆದುಕೊಂಡು ಹಾಸಿಗೆಯ ಸಮೀಪದಲ್ಲಿಡಲು ಹೋದೆ. ಚೆನ್ನಮ್ಮ ಹಿಂದೆಯೇ ಕೊಠಡಿಯೊಳಕ್ಕೆ ಬಂದಳು! ನನ್ನ ಎದೆ ಸ್ವಲ್ಪ ಅದುರಿತು! ಆ ಸಮಯ ಹಾಗೆ ಇತ್ತು. ನಾನು ತಟ್ಟೆಯನ್ನು ಹಾಸಿಗೆಯ ಪಕ್ಕದಲ್ಲಿ ಇಟ್ಟು ತಿರುಗಿ "ನನಗೆ ಇನ್ನೇನೂ ಬೇಡವಮ್ಮಾ; ನೀನು ಇನ್ನು ಹೋಗಬಹುದು" ಎಂದೆ. ಆಕೆ ನಗುತ್ತ "ನಾನಿದ್ರೇನ್ಬುದ್ಧೀ, ತಾವು ತಿನ್ಬಾರ್ದಾ?" ಎಂದು ಕೇಳಿದಳು. ನಾನು "ಓಹೋ, ತಿನ್ನಬಹುದು; ಅದಕ್ಕಲ್ಲ ನಾನು ಹೇಳಿದ್ದು. ಆದರೆ ಈಗ ನನಗೆ ಇನ್ನೇನೂ ಬೇಕಿಲ್ಲ; ಅಲ್ಲದೆ ಇಷ್ಟು ಹೊತ್ತಿನಲ್ಲಿ ನೀನೊಬ್ಬಳೇ ಇಲ್ಲಿ ಇರ..." ನನ್ನ ಮಾತು ಪೂರೈಸುವುದರೊಳಗಾಗಿ ಅವಳು ನನ್ನ ಕೊಠಡಿಯ ಬಾಗಿಲನ್ನು ಮುಚ್ಚಿ ಅಗಣಿಹಾಕಿಬಿಟ್ಟಳು. ಆಕೆ ನನ್ನ ಕೊಠಡಿಯೊಳಕ್ಕೆ ಬಂದೊಡನೆಯೇ ನನ್ನ ಮನಸ್ಸಿನಲ್ಲಿ ಉಂಟಾಗಿದ್ದ ವೊಬ್ಬುಮೊಬ್ಬಾದ ಯಾವುದೋ ಭಾವನೆಯು ಈಗ ಸ್ವಲ್ಪ ಸ್ವಲ್ಪವಾಗಿ ಸ್ಫೂರ್ತಿಗೊಳ್ಳಲಾರಂಭಿಸಿತು. ಅವಳು ಬಾಗಿಲು ಹಾಕಿದ್ದನ್ನು ನೋಡಿ ಇದ್ದಕ್ಕಿದ್ದ ಹಾಗೆಯೇ ನನ್ನ ಮೈನಡುಗಿ ಬಿಸಿಯಾಯಿತು; ಬೆವರು ಮುಖದ ಮೇಲೆಲ್ಲಾ ಮೂಡಿತು. ಗಂಟಲು ಒಣಗಿ ಉಗುಳು ನುಂಗತೊಡಗಿದೆ. ಕಷ್ಟದಿಂದ "ಯಾಕಮ್ಮಾ, ಬಾ—ಬಾಗಿಲು ಹಾಕಿದೆ?" ಎಂದು ಕೇಳುತ್ತ, ತೆಗೆಯುವುದಕ್ಕೋಸ್ಕರ ಎರಡು ಹೆಜ್ಜೆ ಇಟ್ಟೆ. ಚೆನ್ನಮ್ಮ ಸರ್ರನೆ ಸರಿದು ಬಾಗಿಲಿಗೆ ಅಡ್ಡವಾಗಿ ನಿಂತು ಮುಗುಳ್ನಗೆ ನಗತೊಡಗಿದಳು! ನನ್ನ ಮೊಳಕಾಲು ಕಳಚಿದಂತಾಯಿತು. ಸರಿ! ಏನೂ ಸಂಶಯ ಉಳಿಯಲಿಲ್ಲ! ಅವಳ ಅಭಿಪ್ರಾಯ ನನ್ನ ಎದೆಯ ಮೇಲೆ ಊರಿ ಒರೆದಂತಾಯಿತು. ನನ್ನ ಮನಸ್ಸಿನಲ್ಲೇ ಅಂದುಕೊಂಡೆ, "ಇವಳೇ! ಹಳ್ಳಿಗಾಡಿನ ಮುಗ್ಧ ಯುವತಿ!"—ಎಂದು.

೫

ನನಗೆ ನಿಲ್ಲಲು ಕಾಲೇ ಇಲ್ಲದ ಹಾಗಾಯಿತು. ಹೋಗಿ ಹಾಸಿಗೆಯ ಮೇಲೆ ಕುಳಿತು, ಎರಡು ಕೈಗಳಿಂದಲೂ ತಲೆಯನ್ನು ಹಿಡಿದುಕೊಂಡು ಯೋಚಿಸಲಾರಂಭಿಸಿದೆ.

ಇಲ್ಲಿ, ಮುಂದೆ ನಡೆದ ವಿಷಯವನ್ನು ತಿಳಿಸುವುದಕ್ಕೆ ಮೊದಲು ಬೇರೆ ಒಂದೆರಡು ಮಾತುಗಳನ್ನು ಹೇಳಬೇಕೆನ್ನಿಸುತ್ತದೆ. ಕೇಳಿ, ಆ ದಿನ ರಾತ್ರೆ ನನ್ನನ್ನು ಪಾಪದ ಬಲೆಯಿಂದ ತಪ್ಪಿಸಿ ರಕ್ಷಿಸಿದವಳು ನನ್ನ ಲಕ್ಷ್ಮಿ. ಅವಳ ಪ್ರೇಮವೆಂಬ ಕೋಟೆ ನನ್ನನ್ನು ಸಂಪೂರ್ಣವಾಗಿ ಆವರಿಸಿತ್ತು. ನಾನೂ ಅವಳೂ ಒಂದಾದಂದಿನಿಂದ ಇದುವರೆಗೂ, ನಾನು ಅವಳಲ್ಲಿ ಕಾಣದ್ದನ್ನು ಇನ್ನೆಲ್ಲಿಯೂ ಕಾಣಲಾರೆ—ಅನ್ನುವಹಾಗೆ ಮಾಡಿಬಿಟ್ಟಿದ್ದಳು. ರೂಪಕ್ಕಾಗಲಿ, ಗುಣಕ್ಕಾಗಲಿ, ಪ್ರೇಮಕ್ಕಾಗಲಿ, ನಾನು ಅವಳಲ್ಲಿ ಇಟ್ಟ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಬೇಕಾಗಿರಲಿಲ್ಲ. ಲಕ್ಷ್ಮಿ ನನ್ನ ಪಾಲಿಗೆ ಇಲ್ಲದೆ ಇದ್ದು, ನಾನು ಆ ರಾತ್ರೆ ಇದ್ದ ಸನ್ನಿವೇಶದಲ್ಲಿ, ಅರಕ್ಷಿತವಾದ ನನ್ನ ಮನಸ್ಸು ಆ ಹಳ್ಳಿಯ ಯುವತಿಯಲ್ಲಿ ಪ್ರವರ್ತಿಸಿದ್ದರೆ ಆದರಲ್ಲಿ ಆಶ್ಚರ್ಯವಿರುತ್ತಿರಲಿಲ್ಲವೆಂದು ನನಗೆ ಈಗಲೂ ಬೋಧೆಯಾಗುತ್ತದೆ. ಈ ವಿಷಯ ನಡೆದಾಗ ನನಗೆ ಯೌವನದ ಎಳೆಯ ದಿನಗಳು; ದೃಢಕಾಯನಾಗಿದ್ದೆ. ನನ್ನ ರೂಪವನ್ನು ನಾನು ಹೇಳಿಕೊಳ್ಳುವುದು ಕಷ್ಟವಾದರೂ ಕುರೂಪಿಯಲ್ಲವೆಂದು ಖಂಡಿತವಾಗಿ ಹೇಳಬಲ್ಲೆ. ವಿಷಯ ಚೆನ್ನಾಗಿ ತಿಳಿಯಬೇಕಾದರೆ ಇಲ್ಲಿ ಚೆನ್ನಮ್ಮನನ್ನೂ ವರ್ಣಿಸಬೇಕು. ಆಕೆಗೆ ಇಪ್ಪತ್ತು ವರ್ಷಗಳಿಗೆ ಹೆಚ್ಚಿರಲಾರದು. ಅತಿ ಎತ್ತರವೂ ಅಲ್ಲದ ಅತಿ ಗಿಡ್ಡೂ ಅಲ್ಲದ ಆಕೃತಿ. ಬಣ್ಣ ಎಣ್ಣೆಗೆಂಪು. ಮುಖದ ಮಾದರಿ ಲಕ್ಷಣವೆಂತಲೇ ಹೇಳಬೇಕು. ತುಂಬುಪ್ರಾಯದಿಂದ ಬಿಗಿದ ಮೈಕಟ್ಟು. ಆಕೆಯ ತುಟಿಗಳ ಮೇಲೆ ನಾನು ನೋಡಿದಾಗಲೆಲ್ಲಾ ಎಳೆನಗು ಬಹಳ ಸ್ವಾಭಾವಿಕವಾಗಿ ಕಾಣುತ್ತಿತ್ತು. ಕಣ್ಣುಗಳಲ್ಲಿ ಇನ್ನೂ ಹುಡುಗಾಟಿಕೆಯ ಎಳೆಮಿಂಚಿನ ಹೊಳಪು ಸುಳಿದಾಡುತ್ತಿತ್ತು. ಎಳೆನಗೆಯೂ, ಎಳೆಮಿಂಚೂ ಪರಸ್ಪರ ಬೆರೆತು ಒಂದು ಅಪೂರ್ವವಾದ ಮಾಧುರ್ಯದಲ್ಲಿ ಕೊನೆಗಾಣುತ್ತಿತ್ತು. ಮನಸ್ಸನ್ನು ಅಪಹರಿಸುವುದಕ್ಕೆ ಬೇಕಾದ ಎಲ್ಲಾ ಸಾಧಕಗಳೂ ಅವಳಲ್ಲಿದ್ದುವೆಂದು ಒಂದು ಮಾತಿನಲ್ಲಿ ಹೇಳಬಹುದು. ಸಾಲದುದಕ್ಕೆ ಆ ದಿನ ರಾತ್ರೆ ಆಕೆಯ ನಡೆವಳಿಕೆ "ಹಳ್ಳಿಗಾಡಿನ ಮುಗ್ಧ ಯುವತಿ" ಯಿಂದ ಸ್ವಲ್ಪ ದೂರವಾಗಿತ್ತು!

ನಾನು ಹಾಸಿಗೆಯ ಮೇಲೆ ಕುಳಿತೊಡನೆಯೇ ಯೋಚನೆಗಳು ಒಂದೊಂದಾಗಿ, ಹತ್ತುಹತ್ತಾಗಿ, ನೂರುನೂರಾಗಿ ನುಗ್ಗಿ ಬರತೊಡಗಿ, ನನ್ನ ತಲೆಗಾಣದಲ್ಲಿ ಸಿಕ್ಕಿದಂತಾಯಿತು. ನನ್ನ ಮನಸ್ಸು ಕತ್ತಲೆಯ ಸಮುದ್ರದಲ್ಲಿ

ಮುಳುಗಿದಂತೆ ತೋರಿತು. ಗಂಟಲು, ಬಾಯಿ ಒಣಗಿ, ಉಗುಳು ನುಂಗುವುದೂ ಕಷ್ಟವಾಯಿತು. ನಾನು ಈ ಯುವತಿಯಲ್ಲಿ ಕಾಮವನ್ನು ಕೆಣಕಿದೆನೆಂದು ಕನಸಿನಲ್ಲಿಯೂ ಕಾಣೆ! ನನ್ನ ವಿಷಯದಲ್ಲಿ ಇವಳಿಗೆ ಆಸೆ ಹುಟ್ಟಿದ್ದ ಪಕ್ಷದಲ್ಲಿ ಅದಕ್ಕೆ ನಾನು ಯಾವ ವಿಧದಲ್ಲಿಯೂ ಪ್ರೋತ್ಸಾಹ ಕೊಡಲಿಲ್ಲವೆಂದು ಎಲ್ಲಿ ಬೇಕಾದರೂ ನಿಂತು ಯಾವ ಪ್ರಮಾಣವನ್ನಾದರೂ ಮಾಡಬಲ್ಲೆ! ಇವಳು ತಿಳಿಯದವಳಲ್ಲ! ಅದನ್ನು ಅವಳೇ ತೋರಿಸಿಕೊಂಡಿದ್ದಾಳೆ! ತಿಳಿದೇ ಇಂಥಾ ಕೆಲಸದಲ್ಲಿ ಮುಂದಾಳಾಗಿದ್ದಾಳಲ್ಲಾ! ಇದೇನು ಹುಚ್ಚು! ಇದೂ ಒಂದು ತರದ ಹುಚ್ಚೇ ಸರಿ! ಮನೆಯವರಿಗೆ ತಿಳಿದರೆ ಏನು ಗತಿ! ನಾನು ದೊಡ್ಡ ಮನುಷ್ಯನ ಹಾಗೆ ಇವರ ಮನೆಯಲ್ಲಿ ಅತಿಥಿಯಾಗಿರುವುದು; ಈಗ—ಈ ಸರಿರಾತ್ರಿಯಲ್ಲಿ ಇವಳೂ ನಾನೂ ಒಟ್ಟಿಗೆ ನನ್ನ ಕೊಠಡಿಯಲ್ಲಿ . . . ಮರ್ಯಾದೆ ಉಳಿಯುವ ಹಾಗೆ ತೋರಲಿಲ್ಲ. ಬಂದ ರೀತಿಯೋ, ಕದ್ದು ಬಂದಿದ್ದಾಳೆ! ಇವಳಿಗೆ ಮದುವೆಯಾಗಿಲ್ಲವೆ? ನನ್ನ ಮನಸ್ಸಿಗೆ ಬಹಳ ಜುಗುಪ್ಸೆಯಾಯಿತು. ಈಗ ಒಂದೊಂದಾಗಿ ನನಗೆ ಅವಳ ಹಿಂದಿನ ದಿನ ಸಾಯಂಕಾಲದ ನಡೆವಳಿಕೆಗಳೆಲ್ಲಾ ಅರ್ಥವಾಗ ತೊಡಗಿತು. ಅವಳು ಆ ಹೊತ್ತಿನಲ್ಲಿ ನನ್ನ ಹಿಂದೆಯೇ ತೋಟಕ್ಕೆ ಏಕೆ ಬಂದಳು? . . . ನೀರಿನ ಕೊಡ ಶುದ್ಧ ನೆಪ! . . . ನೀರಿನ ಕೊಡವನ್ನು . . . ನನ್ನ ಕೈಲಿ ಏಕೆ ಎತ್ತಿಸಿಕೊಂಡಳು? . . . ಹೋಗಲಿ, ನಾನು ನೀರಿನ ಕೊಡವನ್ನು ಎತ್ತಿ ಕೊಟ್ಟಾಗ, ಅದರ ಸುತ್ತಲೂ ಕೈಹಾಕಬೇಕಾದರೆ ನನ್ನ ಕೈಗೆ ತನ್ನ ಕೈ ಸೋಂಕಿಸಿದಳು. ಆಗ ಅದು ಏನೋ ಆಕಸ್ಮಿಕವೆಂದು ತೋರಿತು. ಇನ್ನೊಂದು ವಿಷಯ. ಅವಳು ಮೊದಲು ಕೊಡವನ್ನು ಎತ್ತುವುದಕ್ಕೋಸ್ಕರ ಬಗ್ಗಿದಾಗ ಅವಳ ಸೆರಗು ಜಾರಿತು. ನಾನು ಅವಳನ್ನು ಆ ಅವಸ್ಥೆಯಲ್ಲಿ ನೋಡಿದಾಗ ಅವಳಲ್ಲಿ ಲಜ್ಜೆಯ ಚಿಹ್ನೆ ಯಾವುದೂ ಕಾಣಲಿಲ್ಲ. ಕೊಡವನ್ನು ತಲೆಯ ಮೇಲೆ ಇಟ್ಟುಕೊಂಡು ನಿಧಾನವಾಗಿಯೇ ಸೆರಗನ್ನು ಮೇಲಕ್ಕೆಳೆದುಕೊಂಡಳು. ಇವುಗಳಲ್ಲೆಲ್ಲಾ ಆಗ ನಾನು ಇವಳ ಮುಗ್ಧತೆಯನ್ನು ಕಾಣುತ್ತಿದ್ದೆನೆಂದು ಭಾವಿಸಿದೆನೇ ವಿನಾ ಇವೆಲ್ಲಾ ನನಗಾಗಿ ಇವಳು ಹರಡುತ್ತಿದ್ದ ಬಲೆಯ ಒಂದೊಂದು ಎಳೆ ಎಂದು ತಿಳಿಯದೆ ಹೋದೆ.

ಈ ಯೋಚನೆಗಳಿಂದ ಅಲ್ಲೋಲಕಲ್ಲೋಲವಾಗಿದ್ದ ನನ್ನ ಮನಸ್ಸನ್ನು ಆದಷ್ಟು ಸ್ತಿಮಿತಕ್ಕೆ ತಂದು, ಇನ್ನು ಈ ಇಕ್ಕಟ್ಟಿನಿಂದ ಹೇಗೆ ಪಾರಾಗ

ಬೇಕೆಂದು ಯೋಚಿಸಲಾರಂಭಿಸಿದೆ. ಸಿಟ್ಟು ತೋರುವುದು ಕಾರ್ಯಕಾರಿಯಲ್ಲ; ಪ್ರಮಾದವಾದೀತೆಂದು ಭಯವಾಯಿತು. ಬೇರೆ ಯಾವುದಾದರೂ ಉಪಾಯದಿಂದ ಇವಳನ್ನು ಮೆಲ್ಲಗೆ ಹೊರಕ್ಕೆ ಸಾಗಹಾಕಬೇಕೆಂದು ಯೋಚಿಸಿದೆ. ಆದರೆ ಏನು ಉಪಾಯ? ಹೇಗೆ ಮಾತನ್ನು ಪ್ರಾರಂಭಿಸಲಿ? ಅಥವಾ ಸುಮ್ಮನೆ ಮುಸುಕುಹಾಕಿಕೊಂಡು ಮಲಗಿಬಿಡಲೆ?—ಎಂದು ಯೋಚಿಸಿದೆ. ಅದು ಆಗದ ಕೆಲಸ. ಇವಳು ಇಲ್ಲಿ ಇರುವ ತನಕ ನನ್ನ ಎದೆಯ ಮೇಲೊಂದು ದೊಡ್ಡ ಬಂಡೆ ಇದ್ದಂತೆಯೇ ಸರಿ. ಇನ್ನೊಂದು ಯೋಚನೆ ತೋರಿತು. ಅದೇ ಸರಿ ಎಂದುಕೊಂಡೆ. ಏನಾದರೂ ಮಾಡಿ, ಅವಳು ಮಾಡುತ್ತಿರುವ ಕೆಲಸ ಬಹಳ ಕೆಟ್ಟದು—ಬಹಳ ನೀಚವಾದದ್ದು—ಬಹಳ ಪಾಪ ಎಂದು ಅವಳ ಮನಸ್ಸಿಗೆ ಚೆನ್ನಾಗಿ ನಾಟುವ ಹಾಗೆ ಮಾತನಾಡಿ, ಉಪಾಯದಿಂದ ಕಳಿಸಿಬಿಡಬೇಕೆಂದುಕೊಂಡೆ. ದೇವರು, ಪಟ್ಟಣವಾಸಿಯಾದ ನಾನು ಈ ಹಳ್ಳಿಯ ಹುಡುಗಿಗೆ ಪತಿವ್ರತಾಧರ್ಮದ ಮೇಲೆ ಒಂದು ಉಪನ್ಯಾಸವನ್ನು ಕೊಡುವ ಹೊತ್ತನ್ನು ತಂದೊದಗಿಸಿದ್ದಕ್ಕಾಗಿ ನನಗೆ ನಾನೇ ನಗುವಂತಾಯಿತು. ಹಾಗೆಯೇ ತಲೆಯನ್ನು ಎತ್ತಿ ಚೆನ್ನಮ್ಮನ ಕಡೆ ನೋಡಿದೆ. ಚೆನ್ನಮ್ಮ ಇನ್ನೂ ಬಾಗಿಲನ್ನು ಒರಗಿಕೊಂಡೇ ನಿಂತಿದ್ದಳು. ನನ್ನ ಮುಖದ ಮೇಲೆ ನಗುವನ್ನು ನೋಡಿ ಅವಳೂ ನಕ್ಕಳು. ನನ್ನ ನಗುವಿನಲ್ಲಿ ಅವಳು ಪ್ರೋತ್ಸಾಹವನ್ನೇನಾದರೂ ಕಂಡಳೇನೋ ಎಂದು ಭಯವಾಗಿ ಕೂಡಲೆ ನನ್ನ ನಗುವನ್ನು ನುಂಗಿಕೊಂಡು, ಮೆಲ್ಲಗೆ "ಚೆನ್ನಮ್ಮಾ" ಎಂದು ಕರೆದೆ. ಚೆನ್ನಮ್ಮ "ಏನು ದೇವರೇ?" ಎಂದು, ಎರಡು-ಮೂರು ಹೆಜ್ಜೆ ಇಟ್ಟು, ನನಗೆ ಸ್ವಲ್ಪ ದೂರದಲ್ಲಿ ನಿಂತಳು. ನಾನು "ಕುಳಿತುಕೋ" ಎಂದೆ. ಅವಳು ನನ್ನ ಹಾಸಿಗೆಯ ಮೇಲೆಯೇ ಕುಳಿತುಬಿಟ್ಟಳು! ನಾನು ಸ್ವಲ್ಪ ದೂರ ಸರಿದು, ಒಂದೆರಡು ಸಲ ಉಗುಳು ನುಂಗಿ, ಪುನಃ "ಚೆನ್ನಮ್ಮಾ" ಎಂದೆ.

"ಏನು ನನ್ನೊಡ್ಯಾ?" ಎಂದು ಮೆಲ್ಲಗೆ ಕೇಳಿದಳು. ಅವಳ ನಡೆವಳಿಕೆಗಳು ಇಷ್ಟು ವಿಪರೀತವಾಗಿದ್ದರೂ ಅವಳ ಧ್ವನಿಯಲ್ಲಿ ಇನ್ನೂ ಮುಗ್ಧತೆಯು ಹರಿಯುತ್ತಿತ್ತೆಂದು ಬೋಧೆಯಾಗುತ್ತಿತ್ತು. ನಾನು ಪ್ರಾರಂಭಿಸಿದೆ:

"ಚೆನ್ನಮ್ಮಾ, ನೋಡು; ನೀನು ಹೀಗೆ ಮಾಡಬಹುದೆ?"

"ಹ್ಯಾಗೆ ಬುದ್ಧೀ?"

"ಹೀಗೆ—ನಡುರಾತ್ರಿಯಲ್ಲಿ ಕದ್ದು ಬಂದಿ . . ."

ನಾನು ಮಾತು ಪೂರೈಸಲಿಲ್ಲ. ಅಷ್ಟರಲ್ಲೀ ಅವಳು—

"ಕದ್ದು ಬಂದಿಲ್ಲಾ ! ನನ್ನ ದೇವರೇ !"

"ಹಾಗಾದರೆ ?"

ಅವಳಿಂದ ಮಾತು ಹೊರಡಲಿಲ್ಲ. ನಾನು ಹೇಳಿದೆ :

"ನೋಡು, ನಿನ್ನ ಮನೆಯವರಿಗೆ ತಿಳಿದರೆ ನಿನಗೂ ಮರ್ಯಾದೆ ಬರೊಲ್ಲ, ನನಗೂ ಬರೊಲ್ಲ."

"ಅವರೇನೂ ಅನ್ನೋಕಿಲ್ಲ ದೇವರೇ."

ನನಗೆ ಇದು ದೂ ಆಶ್ಚರ್ಯವಾಯಿತು ! ಕೇಳಿದೆ :

"ಏನಂದೆ ?"

"ಅವರೂ—ಏನೂ—ಅನ್ನೋಕಿಲ್ಲಾ—ಅಂದೆ."

"ನೋಡು. ಅವರು ಅನ್ನಲಿ, ಬಿಡಲಿ—ಇದು ನಾನು ಒಪ್ಪದ ಕೆಲಸ. ಚೆನ್ನಮ್ಮಾ, ನನಗೆ ಮದುವೆಯಾಗಿದೆ ; ನಾನು ಇನ್ನೊಬ್ಬರ ಹೆಂಡತೀನ ಕೆಡ . . ."

"ಅಯ್ಯೋ ! ಬುದ್ದೀ ಹೀಗ್ಯಾಕಂತೀರಿ ! ನನ್ಗೆ ಮದುವೆ ಇಲ್ಲಾ ನನ್ನೊಡ್ಯಾ—ನಾನು ಬಸ್ವಿ."

"ಏನು ?—ಏನು ?—ಏನಂದೆ ?"

"ನನ್ನ ಬಸ್ವಿ ಬಿಟ್ಟಿದಾರೆ ಒಡೆಯಾ."

"ಬಸ್ವಿ ! ಬಸ್ವಿ !! ಹಾಗಂದರೆ ?"

"ದೇವರಿಗೆ ಬಿಟ್ಟಿದ್ದಾರೆ."

ನಾನು ಎಲ್ಲೂ ನೋಡಿರಲಿಲ್ಲ, ದೇವರಿಗೆ ಬಿಡೋದು—ಬಸ್ವಿ ಮುಂತಾದನ್ನ. ಕೇಳಿದ್ದೆ ಅಷ್ಟೆ. ಆದರೆ ಅದರ ಅರ್ಥ ತಿಳಿದಿರಲಿಲ್ಲ. ನನಗೆ ಮೊದಲಿನ ಹೆದರಿಕೆ ತಪ್ಪಿ ಕುತೂಹಲ ಹೆಚ್ಚಿತು. ವಿಷಯ ಸ್ವಾರಸ್ಯವಾಗಿದೆ ತಿಳಿದುಕೊಳ್ಳಬೇಕೆಂದು—

"ದೇವರಿಗೆ ಬಿಟ್ಟರೆ ? ಯಾರು ?" ಎಂದು ಕೇಳಿದೆ.

"ನಮ್ಮ ಅಪ್ಪನೂ ಅಮ್ಮನೂ."

"ಅದ್ಯಾಕೆ ಬಿಟ್ರು ?"

"ಬುದ್ದೀ, ಈಗ ಎಂಟೊರ್ಸದಾಗೆ ನಂಗೆ ಒಲು ದಣುವಾಗಿತ್ತು. ಆಗ ನಮ್ಮ ಅಪ್ಪೂ ಅಮ್ಮೂ ಮರಡೀ ದೇವರ್ಗೆ ಹರಕೆ ಮಾಡ್ಕೊಂಡ್ರು

ನನ್ಹೊಡ್ಯಾ—ನನ್ಗೆ ಗುಣವಾದ್ರೆ ಆ ದೇವ್ರ ಹೆಸರ್ನಾಗೆ ನನ್ನ ಬಸ್ವಿ ಬಿಟ್ಟೀನಿ ಅಂತ. ನನ್ಗೆ ಗುಣವಾಯ್ತು ಬುದ್ದೀ."

"ಹಾಗಾದ್ರೆ ನೀನು ಮದುವೆ ಮಾಡ್ಕೊಳ್ಳೋದೆ ಇಲ್ಲ!"

"ಇಲ್ಲ ಬುದ್ದೀ."

"ಹೀಗೇ ಇರ್ತೀಯಾ?"

"ಹೌದು ನನ್ಹೊಡ್ಯಾ."

"ಸೂಳೆಯ ಹಾಗೆ!"

ನನ್ನ ಈ ಮಾತನ್ನು ಕೇಳಿ ಅವಳ ಎದೆಯಲ್ಲಿ ಚೂರಿಯನ್ನು ನೆಟ್ಟ ಹಾಗಾಗಿರಬೇಕು. ಒಂದು ಕ್ಷಣದಲ್ಲಿ ಅವಳ ಹುಬ್ಬುಗಳು ಗಂಟಿಕ್ಕಿದವು. ಮೂಗಿನ ಹೊಳ್ಳೆಗಳೂ ತುಟಿಗಳೂ ಅದುರಲಾರಂಭಿಸಿದವು. ಕೋಪಗೊಂಡ ಸ್ತ್ರೀಯ ಮುಖದಲ್ಲಿ ಒಂದು ವಿಧವಾದ ಭೀಷಣತೆಯಿರುತ್ತದೆ. ಅವಳ ಮುಖವು ಆ ಭೀಷಣತೆಯಲ್ಲಿ ತೇಲುತ್ತಿರುವಂತೆ ತೋರಿತು. ಕ್ರೂರವಾದ ದೃಷ್ಟಿಯಿಂದ ನನ್ನನ್ನು ತಿವಿಯುತ್ತ—

"ಬುದ್ದೀ, ತಾವು ಆ ಮಾತು ಹೇಳಬಾರ್ದು!" ಎಂದಳು.

ಅವಳಲ್ಲಿ ಆದ ಮಾರ್ಪಾಟನ್ನು ನೋಡಿ ನನಗೆ ಯಾಕೋ ಸ್ವಲ್ಪ ದಿಗ್ಭ್ರಮೆಯಾದ ಹಾಗಾಯಿತು. ಸ್ವಲ್ಪ ಉಗುಳು ನುಂಗುತ್ತ—

"ಯಾವ ಮಾತು?" ಎಂದು ಕೇಳಿದೆ.

"ನಾವು ಸೂಳೇರಲ್ಲ—ತಿಳೀರಿ!"

ನನಗೆ ಇನ್ನೂ ಆಶ್ಚರ್ಯವಾಯಿತು! ಮದುವೆ ಇಲ್ಲ! ನಡೆವಳಿಕೆ ನೋಡಿದರೆ ವಿಪರೀತ!! ಆದರೂ "ಸೂಳೇರಲ್ಲ!" ನನಗೂ ಸ್ವಲ್ಪ ಸಿಟ್ಟು ಬಂದಂತಾಯಿತು. ನಾನು ಹೇಳಿದೆ—

"ಅಷ್ಟಲ್ಲದೆ ಮತ್ತೇನು? ನೀನು ಎಲ್ಲರ ಹಾಗೆ ಮದುವೆಮಾಡಿಕೊಂಡು ಗರ್ತಿಯ ಹಾಗೆ ಇರೋದು ಬಿಟ್ಟು, ಹೀಗೆ ಈ ನಡುರಾತ್ರಿಯಲ್ಲಿ ಮೇಲೆ ಬಿದ್ದು ಬಂದಿ . . ."

"ಬುದ್ದೀ, ನಿಮ್ಗೆ ಇನ್ನೂ ಗೊತ್ತಾಗಿಲ್ವೆ? ಬಸ್ವೀರು ಲಗ್ನಾ ಮಾಡ್ಕೊಳ್ಳೋಕಾಗ್ದು ನನ್ಹೊಡ್ಯಾ."

"ಯಾಕಾಗ್ದು?"

"ಹರಕೆ ಒಪ್ಪಿಸ್ಬೇಕಲ್ಲಾ ಬುದ್ದೀ! ಇಲ್ದಿದ್ರೆ ಕೇಡಲ್ವಾ?"

"ಮದುವೇ ಮಾಡ್ಕೊಂಡ್ರೆ ಹರಕೆ ಒಪ್ಸೋಕಾಗಲ್ವೆ?"

" ಇಲ್ಲಾ ನನ್ನೊಡ್ಯಾ ; ಒಬ್ಬನ್ನ ಮದ್ವೆ ಮಾಡ್ಕೊಂಡ್ರೆ ನಿಮ್ಮಂಥಾ ಪರ ಸ್ಯಾವೆ ಹ್ಯಾಗ್ಬುದ್ಧೀ ಮಾಡೋದು ? ಮಾನ ಬರ್ತದಾ ? "

" ಸರಿ, ಇನ್ನೊಬ್ಬನ ಸೇವೆ ಯಾಕೆ ಮಾಡ್ಬೇಕು ? "

" ಮತ್ತೆ ! ದೇವ್ರು ಹರಕೆ ಒಪ್ಸಿಸ್ಬೇಡ್ವಾ ? "

" ಹೀಗೆಯೇ ಒಪ್ಪಿಸೋದು ? ದೇವರ ಹೆಸರಿನಲ್ಲಿ ಸೂಳೆಗಾರಿಕೆ ಮಾಡುತ್ತ . . . "

ತಟ್ಟನೆ ಅವಳು ಪುನಃ ಹುಬ್ಬುಗಂಟಿಕ್ಕಿ—

" ಬುದ್ಧೀ, ಆ ಮಾತು ನನಗೆ ಹೇಳ್ಬೇಡಿ ! " ಎಂದಳು.

" ನೋಡು, ನಾನು ನಿನ್ನ ಗಂಡನಲ್ಲ ; ನೀನು ಇಷ್ಟು ರಾತ್ರಿಯಲ್ಲಿ ನನ್ನ ಹತ್ತಿರ ಒಂದಿದ್ದೀಯಲ್ಲ—ಇದು ಯಾರು ಮಾಡುವ ಕೆಲಸ ? ' ಸೂಳೇರಲ್ಲ ' ಎಂದು ಮಾತ್ರ ಹೇಳುವೆಯಲ್ಲ ! "

" ನಾವು ಸೂಳೇರಲ್ಲ ಬುದ್ಧೀ, ನಾವು ಸೂಳೇರಲ್ಲ ! ಸೂಳೇರಿಗೆ ದುಡ್ನಾಸೆ ನನ್ನೊಡ್ಯಾ. ಅವರು ಜನಾಜನಾ ನೋಡಾಕಿಲ್ಲ. ಅವರಿಗೆ ಹರಕೆ[illegible]ರಕೆ ಏನೂ ಇಲ್ಲ ; ಆ ಕಸಬೇ ಅವರಿಗೆ ಜೀವನ. "

" ನೀವು ? "

" ನಾವು ಹಣಾ[illegible]ಣಾ ಮುಟ್ಟಾಕಿಲ್ಲ ನನ್ನೊಡ್ಯಾ. ಅಂತಾ ಇಂತಾ ಜನ್ರನ್ನ ಹತ್ರ ಸೇರ್ಸಾಕಿಲ್ಲ. ತಮ್ಮಂತಾ ಕುಲೀನ್ರು ಯಾರಾದ್ರು ಬಂದ್ರೆ ಅವ್ರ ಸ್ಯಾವೆಮಾಡಿ ಹರಕೆ ಒಪ್ಸಿಸ್ತೀವಿ. ನಮ್ಮನ್ನ ಸೂಳೇರು ಅನ್ಬ್ಯಾಡಿ ನನ್ನ ದೇವರೇ. "

" ಹಾಗಾದ್ರೆ ಈ ನಿನ್ನ ' ಸ್ಯಾವೆ ' ನಿನ್ನ ತಂದೆ ತಾಯಿಗೆ ಗೊತ್ತೊ ? "

" ಇಲ್ವೆ ಬುದ್ಧೀ ! ಅವ್ರು ಹರ್ಕೆ ಮಾಡ್ಕೊಂಡೋರು ಅವ್ರಿಗೆ ಗೊತ್ತಿಲ್ದೇ ಇರ್ತದಾ ! "

" ಸರಿ, ಅವರೇನೋ ಕಳಿಸಿದರು. ಆದರೆ ನಾನು ಇದಕ್ಕೆ ಒಪ್ಪುತ್ತೀನಿ—ಇಲ್ಲಾ ಅನ್ನೋದು ಅವರಿಗೇನು ಗೊತ್ತು ? ಯಾವ ಧೈರ್ಯದ ಮೇಲೆ ನಿನ್ನ ನನ್ನ ಹತ್ರ ಕಳಿಸಿದರು ? "

ಈ ಪ್ರಶ್ನೆಗೆ ಕೂಡಲೆ ಉತ್ತರ ಒರಲಿಲ್ಲ. ಮುಗುಳ್ನಗೆ ನಗುತ್ತ ಕೊರಳನ್ನು ಒಂದು ಪರಸೆಯಲ್ಲಿ ಒಲುಕಿಸಿ ಓರೆಗಣ್ಣಿನಿಂದ ನೋಡುತ್ತ—

" ನೀವು—ಕೇಳಿದಿರಂತೆ—ನಮ್ಮ ಆಳ್ಳ—ನಾನು ಯಾರು—ಏನು—ಎತ್ತ ಅಂತ ! " ಎಂದು ಸ್ವಲ್ಪ ನಾಚಿಕೆಯಿಂದ ಹೇಳಿದಳು.

ಈಗ ನನಗೆ ಅರ್ಥವಾಯಿತು! ನಾನು ಆಳನ್ನು ಕೇಳಿದಾಗ ಅವನು ವ್ಯಂಗ್ಯವಾಗಿ ನಕ್ಕು "ಯಾಕೆ ಬುದ್ದೀ" ಎಂದು ಕೇಳಿದ್ದು! "ಅಯ್ಯೋ! ಭಗವಂತಾ!" ಅಂದುಕೊಂಡೆ.

"ಹೌದು, ಚೆನ್ನಮ್ಮಾ ಕೇಳಿದೆ; ಸುಮ್ಮನೆ ತಿಳಿದುಕೊಳ್ಳೋಣಾ ಅಂತ ಕೇಳಿದೆ ಅಷ್ಟೆ. ಚೆನ್ನಮ್ಮಾ, ನನ್ನ ಲಕ್ಷ್ಮಿಯ ಆಣೆಗೂ ಬೇರೆ ಯಾವ ಆಸೆಯೂ ಇಲ್ಲ."

"ಅಯ್ಯೋ! ಒಡೀ ನನ್ನ ದೇವರೇ, ಈಗೇನಾಯ್ತು. ಇದಕ್ಕೆಲ್ಲಾ ನೀವು ಆಣೆಗೀಣೆ ಇಡಬ್ಯಾಡ್ರಿ!"

"ಹಾಗಲ್ಲ ಚೆನ್ನಮ್ಮಾ, ಕೇಳು, ಹೋದ ಪ್ರಾಣ ಮತ್ತೆ ಬರುತ್ತೆಯೆ?"

ಚೆನ್ನಮ್ಮ ಸುಮ್ಮನಿದ್ದಳು.

"ಹೇಳು."

"ಇಲ್ಲ ನನ್ಒಡ್ಯಾ."

"ಹಾಗಾದ್ರೆ ಕೇಳು, ಹೆಂಗಸಿಗೆ ಮಾನವೇ ಪ್ರಾಣ. ಮಾನ ಕಳ ಕೊಂಡ ಹೆಂಗಸು ನಾಯಿಗಿಂತ ಕಡೆ. ಇರೋದೇ ಮಾನ ನಿಮಗೆ; ನೀವು ಅದನ್ನ ಹೀಗೆ ಮಾರಿಕೋಬಾರದು. ಮಾನ ಬಿಟ್ಟ ಹೆಂಗಸಿಗೆ ನರಕದಲ್ಲೂ ಸ್ಥಳವಿಲ್ಲಾ ಅಂತ ಹೇಳ್ತಾರೆ ತಿಳಿದವರು."

"ಬುದ್ದೀ, ನೀವು ಹೇಳೋದು ಲಗ್ನ ಆಗಿ ಗಂಡ ಇರೋರ್ಗೆ ಸರಿ ನನ್ಒಡ್ಯಾ. ಅವ್ರು ನಮ್ಮ ಹಾಗಿದ್ರೆ ಅವರನ್ನ ಜಾತಿಯಿಂದ ಹೊರಗೆ ಹಾಕ್ತಾರೆ. ನಮಗೆ ಹಾಗಲ್ಲಾ ದೇವರೇ; ನಮ್ಮನ್ನ ದೇವರಿಗೆ ಬಿಟ್ಟಿ ದಾರೆ. ನಮಗೆ ನಿಮ್ಮಂತಾ ಕುಲೀನರ ಸ್ಯಾವೇನೇ . . ."

"ಅಯ್ಯೋ, ಚೆನ್ನಮ್ಮಾ, ನಿನಗೆ ತಿಳೀದು. ಇಲ್ಲಿ ಕೇಳು, ದೇವರ ಹೆಸರಿನಲ್ಲಿ ಹೆಂಗಸು ಮಾನಗೆಟ್ಟರೆ ಅವನಿಗೆ ಪ್ರೀತೀನೇ? ದೇವರಲ್ಲಿ ಹರಕೆ ಇದ್ದರೆ ಆ ದೇವರ ಸೇವೆಮಾಡು. ಯಾರು ಬೇಡ ಅನ್ನುತ್ತಾರೆ. ಅದು ಬಿಟ್ಟು ಹೀಗೆ ಮಾನವನ್ನು ಮಾರಿಕೊಳ್ಳುವುದೆ?"

"ಬುದ್ದೀ, ತಮ್ಮಂತಾ ಕುಲೀನರೇ ನಮಗೆ ದೇವರು, ನನ್ಒಡ್ಯಾ. ನಿಮಗೆ ಸ್ಯಾವೆಮಾಡಿದರೆ ಅದೇ ನಮ್ಮ ಪುಣ್ಯಾ."

ಅವಳ ಮಾತುಗಳನ್ನು ಕೇಳಿ ನನ್ನ ಹೃದಯದಿಂದ "ಅಯ್ಯೋ, ದೇವರೇ! ನಿನ್ನ ಹೆಸರಿನಲ್ಲಿ ನಿನ್ನನ್ನು ಮೆಚ್ಚಿಸುವುದಕ್ಕೋಸ್ಕರ ಎಷ್ಟು ಅನ್ಯಾಯ—ಎಷ್ಟು ಪಾಪ ನಡೆಯುತ್ತಿದೆ!" ಎಂಬ ಉದ್ಗಾರವು ಹೊರ

ಟಿತು. ಸ್ವಲ್ಪ ಕಾಲ ಏನೂ ಮಾತನಾಡದೆ ನನಗೆ ನಾನೇ ಯೋಚಿಸ ತೊಡಗಿದೆ.

ಇದೇನು ಈ ಜನರ ಮೌಢ್ಯ! ಪ್ರಪಂಚದಲ್ಲಿ ಇಂತಹ ಅಸಹ್ಯಕರ ವಾದ ವಾಡಿಕೆಯೂ ಉಂಟೆ! ದೇವರಿಗೆ ಏನುವುದೇನೋ ಸರಿ ಕೇಳಿ ದ್ದೇನೆ. ಅದು ಅವರವರ ಭಕ್ತಿ. ಆದರೆ ಈ ಕೆಲಸ! ಹೀಗೆಯೇ?—ಈ ಜನರು ದೇವರಿಗೆ ಹರಕೆಯನ್ನೊಪ್ಪಿಸುವುದು? ಭಗವಂತನ ದಿವ್ಯವಾದ ಹೆಸರಿನಲ್ಲಿ ಈ ಜನರು ಇಂತಹ ಹೇಯವಾದ ಕೆಲಸವನ್ನು ಮಾಡುತ್ತಿರು ವರಲ್ಲಾ—ಇವರ ಗತಿ ಏನು? ಈ ಹುಡುಗಿಯು ಖಂಡಿತವಾಗಿಯೂ ಏನೂ ಅರಿಯದ ಹಳ್ಳಿಗಾಡಿನ ಮುಗ್ಧ ಯುವತಿಯೇ ಸರಿ! ಜಾರಸ್ತ್ರೀಯರ ಲಕ್ಷಣವೇ ಬೇರೆ; ಇವಳ ರೀತಿಯೇ ಬೇರೆ. ಇವಳು ತನ್ನ ಜನರ ಅಸಹ್ಯ ಕರವಾದ ವಾಡಿಕೆಗೆ ಬಲಿಬಿದ್ದ ಮುಗ್ಧೆ. ತಾನು ಮಾಡುತ್ತಿರುವ ಕೆಲಸ ದಿಂದ ದೇವರಿಗೆ ಹರಕೆ ತಲಪುತ್ತದೆಯೆಂದೇ ಇವಳ ನಂಬಿಕೆ. ಅಯ್ಯೋ! ದೇವಾ! ತಂದೆತಾಯಿಗಳೇ ಕಯ್ಯಾರ ತಮ್ಮ ಒಬ್ಬ ಮಗಳ ಜೀವ ವನ್ನು ಪಾಪದಿಂದ ತುಂಬುತ್ತಿರುವರಲ್ಲಾ!—ಅವರ ಗತಿ ಏನು? ಇವಳ ಗತಿ ಏನು? ಅವರೇನೋ ತಮ್ಮ ಹರಕೆಯಿಂದ ಮಗಳು ಬದುಕಿದ ಳೆಂದು ತಿಳಿದಿರಬಹುದು. ಆದರೆ ಈಗ ದಿನದಿನವೂ ಅವಳು ಮಾಡುತ್ತಿ ರುವ ಕೆಲಸದಿಂದ, ಅವಳ ಜೀವನಕ್ಕೆ ಆತ್ಮರೂಪವಾದ ಸ್ತ್ರೀತ್ವವೇ ಸಾಯು ತ್ತಿದೆಯಲ್ಲಾ! ಇದನ್ನು ಅವರು ತಿಳಿಯುವ ಬಗೆ ಹೇಗೆ? ಆಗ, ಮಗುವಾಗಿ ದ್ದಾಗ ಒಂದು ದಿನ, ಒಂದು ಕ್ಷಣದಲ್ಲಿ ಸಾಯುವ ಬದಲು, ಈಗ ದಿನ ದಿನವೂ ಕ್ಷಣಕ್ಷಣವೂ ಸ್ವಲ್ಪಸ್ವಲ್ಪವಾಗಿ ಸಾಯುತ್ತಿರುವಳಲ್ಲಾ! ಅದನ್ನು ಇವಳು ತಿಳಿದಿದ್ದಾಳೆಯೇ! ಇಲ್ಲ!—ಅದೇ ಆಶ್ಚರ್ಯ! ತಾನು ಮಾಡುತ್ತಿ ರುವ ಕೆಲಸ ಸರಿಯಾದದ್ದು—ದೇವರಿಗೆ ಒಪ್ಪಿದ ಕೆಲಸ—ಅವನು ಉಳಿಸಿ ಕೊಟ್ಟ ಜೀವವನ್ನು ಹೀಗೆ ಕಳೆದರೆ ಅದು ಅವನಿಗೆ ಇಷ್ಟವಾದ ಸೇವೆ— ಎಂದು ಮೊದಲಾಗಿ ಅವಳ ದೃಢವಾದ ನಂಬಿಕೆ. ಮದುವೆಯಾದ ಹೆಂಗ ಸಿನಲ್ಲಿ ಯಾವ ಕೃತ್ಯವನ್ನು ಅವಳು ಕೆಟ್ಟದು ಎಂದು ಹೇಳುವಳೋ ಆ ಕೃತ್ಯವನ್ನು ತನ್ನ ಜೀವನದ ಧರ್ಮ ಎಂದು ಅನುಸರಿಸುತ್ತಾಳೆ! ಇದಕ್ಕೆ ಅವಳ ತಂದೆತಾಯಿಗಳೂ ಸಹಾಯ! ಪಾಪ! ಅವರಾದರೂ ಏನು ಮಾಡಿ ಯಾರು? ಅವರೂ ಜಾತಿಯ ವಾಡಿಕೆಗೆ ಬಲಿಬಿದ್ದಿದ್ದಾರೆ! . . .

ಬಲು ದಾರುಣವಾದ ಈ ಯೋಚನೆಗಳಿಂದ ನನ್ನ ಎದೆ ಬಿರಿದಂತಾಗಿ

ದೊಡ್ಡದಾಗಿ ನಿಟ್ಟುಸಿರು ಬಿಟ್ಟೆ. ಚೆನ್ನಮ್ಮ ಸುಮ್ಮನೆ ಸೆರಗಿನ ತುದಿಯನ್ನು ತಿರುವುತ್ತಿದ್ದವಳು ನಾನು ನಿಟ್ಟುಸಿರು ಬಿಟ್ಟುದನ್ನು ಕೇಳಿ ನನ್ನ ಕಡೆಗೆ ನೋಡಿದಳು. ಅವಳ ಮುಖದ ಮೇಲೆ ಆಗಲೇ ಏನೋ ಕಳವಳ ತೋರುತ್ತಿತ್ತು. ಇಷ್ಟು ದಿನಕ್ಕೆ ಎಲ್ಲಿಯಾದರೂ ಮದುವೆಯಾಗಿ ನಾಲ್ಕು ಜನರಂತೆ ತಾನೂ ಸುಖವಾಗಿ ಸಂಸಾರಮಾಡಿಕೊಂಡಿರುವುದು ಬಿಟ್ಟು, ಈ ಮುಗ್ಧೆ ಅವರ ಯಾವುದೋ ಒಂದು ಅಸಹ್ಯವಾದ ವಾಡಿಕೆಗೆ ಬಲಿಯಾಗಿದ್ದಾಳಲ್ಲಾ—ಎಂಬ ಏನೋ ತಡೆಯಲಾರದ ಒಂದು ಸಂಕಟದಿಂದ ನನ್ನ ಎದೆ ತಲ್ಲಣಿಸಿ, ಕಣ್ಣುಗಳಲ್ಲಿ ಹಸಿಗೂಡಿತು.

"ಚೆನ್ನಮ್ಮಾ, ನಿನ್ನ ಭಾಗದ ದೇವರೇ ನಿನ್ನನ್ನು ಕಾಪಾಡಬೇಕು" ಎಂದು ಹೇಳಿ ಕಣ್ಣೊರಸಿಕೊಂಡೆ. ಚೆನ್ನಮ್ಮನಿಗೆ ನನ್ನ ಕಣ್ಣೀರನ್ನು ನೋಡಿ ಸ್ವಲ್ಪ ಗಾಬರಿಯಾಗಿರಬೇಕು. ನನ್ನ ಹತ್ತಿರಕ್ಕೆ ಸರಿದು ಬಂದಳು. ಅವಳು ಹಾಗೆ ನನ್ನ ಹತ್ತಿರಕ್ಕೆ ಸರಿದು ಬಂದಾಗ ನನಗೆ ದೂರ ಸರಿಯಲು ಮನಸ್ಸು ಬರಲಿಲ್ಲ. ಅವಳು ಮನಸಾ ಪಾಪಿಷ್ಠೆಯಾಗಿರಲಿಲ್ಲ. ಅಜ್ಞಾನದ ಪಾಪಕ್ಕೆ ಅವಳ ದೇಹವು ಮಾತ್ರ ಭಾಗಿಯಾಗಿತ್ತು. ತಾವರೆ ಎಲೆಯ ಮಧ್ಯದಲ್ಲಿ ಒಟ್ಟುಗೂಡಿ ನಿಂತು, ವಜ್ರದಂತೆ ಥಳಥಳಿಸುವ ನಿರ್ಮಲವಾದ ಮಂಜಿನ ಹನಿಯಂತೆ ಅವಳ ಆತ್ಮವು ಪರಿಶುದ್ಧವಾಗಿತ್ತು. ಅವಳ ಸರಳತೆಯನ್ನು ನೋಡಿ ನನಗೆ ಅತ್ಯಂತ ಕನಿಕರವಾಯಿತು. ಅವಳನ್ನು ನೋಡಿದ ಹಾಗೆಲ್ಲಾ, ಅವಳ ವಿಷಯವನ್ನು ಯೋಚಿಸಿದ ಹಾಗೆಲ್ಲಾ ನನ್ನ ಆರಿದ ಕಣ್ಣುಗಳಲ್ಲಿ ಪುನಃ ಪುನಃ ನೀರೂರಿಬಂತು. ನನ್ನ ಕಣ್ಣೀರಿನಲ್ಲಿ ಅವಳ ಕಲುಷಿತವಾದ ದೇಹವನ್ನು ತೊಳೆಯೋಣವೆನ್ನಿಸಿತು. ನನ್ನ ದೇಹವೂ ಆತ್ಮವೂ ಅವಳಿಗಾಗಿ ಅತ್ಯಂತ ಸ್ನೇಹಮಯವಾಯಿತು. ಮೆಲ್ಲನೆ ಅವಳ ಕೈಹಿಡಿದುಕೊಂಡೆ. ನನ್ನ ಮೈ ಸ್ವಲ್ಪ ನಡುಗಿತು. ಕೈಬಿಡದೆ, ಹಾಗೆಯೆ ಅವಳ ಬೆರಳುಗಳನ್ನು ಸವರುತ್ತ "ಚೆನ್ನಮ್ಮಾ" ಎಂದು ಮೆಲ್ಲನೆ ಕರೆದೆ. ನನ್ನ ಸ್ನೇಹ, ನನ್ನ ಕನಿಕರ ಅವಳ ಆತ್ಮವನ್ನು ಸೋಂಕಿತೆಂದು ತೋರುತ್ತದೆ. ನಾನು ಕೈಹಿಡಿದು ಅವಳ ಹೆಸರನ್ನು ಹೇಳಿದೊಡನೆಯೇ ಅವಳು ಇನ್ನೂ ಹತ್ತಿರಕ್ಕೆ ಸರಿದು, ತಲೆಯನ್ನು ತಗ್ಗಿಸಿ ಬಹು ಮೃದುವಾಗಿ "ಏನು ನನ್ನ ದೇವರೇ" ಎಂದು ಕೇಳಿದಳು. ಅವಳ ಮುಖದ ಮೇಲೆ ಏನೋ ಒಂದು ವಿಧದ ಯೋಚನೆಯೋ—ಕಳವಳವೋ ತೋರುತ್ತಿತ್ತು. ನಾನು ಅವಳ ಮುಖವನ್ನೇ ನೋಡುತ್ತ—

" ನೋಡು ಚೆನ್ನಮ್ಮ, ನಾನು ನಿನ್ನ ದೇವರು ಅಂತ ನೀನು ಹೇಳಲಿಲ್ಲವೆ ? "

" ಹೌದು ನನ್ನೊಡ್ಯಾ, ನೀವೇ ನನ್ನ ದೇವರು."

" ಹಾಗಾದರೆ ನಾನು ಹೇಳಿದ ಹಾಗೆ ನೀನು ಕೇಳಬೇಕಲ್ಲವೆ ? "

" ನಿಮ್ಮ ದಾಸಿ ಇದೀನಿ, ಹೇಳಿ ನನ್ನ ದೇವರು."

" ನೀನು ಇನ್ನು ಮುಂದೆ ಈ ಪಾಪದ ಕೆಲಸವನ್ನು ಮಾಡಕೂಡದು ತಿಳಿಯಿತೆ ? "

" ಮತ್ತೆ—ಹರಕೆ ?—ದೇವರಿಗೆ ? "

" ಅಯ್ಯೋ ಆ ಹರಕೆ ಹಾಳಾಯ್ತು ! ನೋಡು, ಇಂದು ನಾನು ನಿನ್ನ ದೇವರು ಅಂತ ಹೇಳಿದೆ. ಇದಕ್ಕೆ ಹಿಂದೆ ನೀನು ಇನ್ಯಾರ ಸೇವೆಯನ್ನೂ ಮಾಡಲಿಲ್ಲವೆ ? "

ಚೆನ್ನಮ್ಮ ಮಾತನಾಡಲಿಲ್ಲ. ತಲೆಯನ್ನು ತಗ್ಗಿಸಿದಳು.

" ನೋಡು, ಇದಕ್ಕೆ ಹಿಂದೆ ನೀನು ಇನ್ನೂ ಯಾರ ಯಾರ ಸೇವೆಯನ್ನೋ ಮಾಡಿದ್ದೀಯೆ. ಇಂದು ನಾನು ದೇವರು ಎಂದು ಹೇಳಿ ನನ್ನ ಸೇವೆಗೆ ಬಂದಿದ್ದೀಯೆ. ಒಬ್ಬರು ತಿಂದ ಎಂಜಲನ್ನು ಇನ್ನೊಬ್ಬರಿಗೆ ಕೊಡಬಹುದೆ ? ದೇವರಿಗೆ ಈ ಎಂಜಲು ಹರಕೆಯೆ ? ಚೆನ್ನಾ, ನಿನಗೆ ತಿಳಿಯದು—ಇದು ಬಹಳ ಪಾಪಕರವಾದದ್ದು—ಎಂದು. ತಿಳಿದಿದ್ದರೆ ಎಂದಿಗೂ ನೀನು ಈ ಪಾಪದ ಕೆಲಸವನ್ನು ಮಾಡುತ್ತಿರಲಿಲ್ಲ. ಸ್ವಲ್ಪ ಯೋಚಿಸಿ ನೋಡು—ನಿನಗೂ ಸೂಳೆಗೂ ಏನು ವ್ಯತ್ಯಾಸ ? ಅವಳಿಗೆ ಅದು ಜೀವನ, ನಿನಗೆ ಜೀವನಕ್ಕೆ ಕಡಮೆಯಿಲ್ಲ. ಆದರೆ ಪಾಪವೇನೋ ಒಂದೇ ! ದೇವರು ಈ ಪಾಪವನ್ನು ಎಂದಿಗೂ ಒಪ್ಪನು ! "

ಚೆನ್ನಮ್ಮ ಮೌನವಾಗಿ ಎಲ್ಲವನ್ನೂ ಕೇಳಿದಳು. ಮೊದಲಿನ ಭ್ರಾಂತಿ, ಕಳವಳದ ಚಿಹ್ನೆ ಅವಳ ಮುಖದಿಂದ ಜಾರಿತು. ಸ್ವಲ್ಪಸ್ವಲ್ಪವಾಗಿ ಮುಖವು ಬಾಡಿತು. ದೇಹವು ಕುಗ್ಗಿತು. ದೃಷ್ಟಿ ನೆಲವನ್ನು ಹಿಡಿಯಿತು. ಮೆಲ್ಲಗೆ ಅವಳ ಕೈಯನ್ನು ಅಲುಗಿಸಿ " ಚೆನ್ನಾ " ಎಂದು ಕರೆದೆ. ತಲೆಯೆತ್ತಿ ನನ್ನ ಕಡೆ ನೋಡಿದಳು. ಅವಳ ದೃಷ್ಟಿಯಲ್ಲಿ ದಾರಿತಪ್ಪಿ ಅಲೆಯುತ್ತಿದ್ದ ಮಗುವಿನ ಅಸಹಾಯತೆಯ ಛಾಯೆ ತೋರುತ್ತಿತ್ತು. ನನ್ನ ಮಾತು ಸರಿ—ಎಂದು ಅವಳು ಮನಗಂಡಿರಬೇಕು.

" ಚೆನ್ನಾ, ನಾನು ಹೇಳಿದ್ದು ಸರಿಯಲ್ಲವೆ ? " ಎಂದು ಕೇಳಿದೆ.

ಚೆನ್ನಮ್ಮ ಬಾಯಿ ಬಿಡಲಿಲ್ಲ. ತಲೆಯನ್ನು ಪುನಃ ತಗ್ಗಿಸಿದಳು. ನಾನು ನೋಡುತ್ತಿದ್ದ ಹಾಗೆಯೇ ಎರಡುಹನಿ ಕಣ್ಣೀರು ಪಳಪಳನೆ ಅವಳ ಕೆನ್ನೆಗಳ ಮೇಲೆ ಉರುಳಿಬಿದ್ದುವು. ಅದೇ ನನಗೆ ಅವಳು ಕೊಟ್ಟ ಮೌನವಾದ ಉತ್ತರವಾಯಿತು. ಅವಳ ಶುಭ್ರವಾದ ಆತ್ಮವನ್ನು ಆವರಿಸಿದ್ದ ಅಜ್ಞಾನದ ತೆರೆಯನ್ನು ತೆಗೆದೆಸೆಯುವ ಕೆಲಸ ನನ್ನ ಪಾಲಿಗಿತ್ತು! ಯಾವುದೋ ಸ್ಥಳವನ್ನು ಸೇರಬೇಕೆಂದು ಒಂದು ಮಾರ್ಗವನ್ನು ಹಿಡಿದು, ಅದರಲ್ಲಿ ಹೆಜ್ಜೆಹಾಕುತ್ತ, ಹೆಜ್ಜೆ ಇಟ್ಟಹಾಗೆಲ್ಲಾ ಆ ಸ್ಥಳವು ಹತ್ತಿರವಾಗುತ್ತಿದೆ ಯೆಂದು ನಂಬಿ ಬಹುದೂರ ನಡೆದುಹೋದಮೇಲೆ, ಯಾರಾದರೂ ದಾರಿ ಯಲ್ಲಿ ಸಿಕ್ಕು, ನಾವು ಹೊರಟ ಸ್ಥಳಕ್ಕೆ ಅದು ಮಾರ್ಗವಲ್ಲವೆಂದೂ ಆ ದಾರಿಯಲ್ಲಿ ನಡೆದಷ್ಟೂ ನಾವು ಸೇರಬೇಕೆಂದಿರುವ ಸ್ಥಳದಿಂದ ದೂರ ವಾಗುತ್ತಿರುವೆವೆಂದೂ ಹೇಳಿದರೆ ಹೇಗಿರುತ್ತದೆ! ನಾನು ನನ್ನ ಮಾತು ಗಳಿಂದ ಚೆನ್ನಮ್ಮನ ಹೃದಯದಲ್ಲಿ ಸ್ವಲ್ಪ ಹೆಚ್ಚುಕಡಮೆ ಅದೇ ವಿಧವಾದ ಭಾವನೆಯನ್ನುಂಟುಮಾಡಿದ್ದೆ.

ಚೆನ್ನಮ್ಮ ಬಹಳ ಅತ್ತಳು. ನಾನು ಅವಳನ್ನು ಸಮಾಧಾನಮಾಡುತ್ತ— . . . "ನೋಡು ಚೆನ್ನಾ, ನಿನ್ನನ್ನು ಕಂಡರೆ ನನಗೆ ಸಿಟ್ಟಾಗಲಿ, ಅಸಹ್ಯ ವಾಗಲಿ ಇಲ್ಲ. ಹೇಳು ಸಿಟ್ಟೆ ನನಗೆ?" ಎಂದು ಕೇಳಿದೆ.

ಬಹು ನೊಂದ ಧ್ವನಿಯಿಂದ ಚೆನ್ನಮ್ಮ ಹೇಳಿದಳು—

"ಇಲ್ಲ ನನ್ನೊಡ್ಯಾ."

"ಸರಿ, ನಿನಗೆ ನನ್ನ ಮೇಲೆ ಸಿಟ್ಟೇನಾದರೂ . . ."

"ಅಯ್ಯೋ! ನನ್ನ ದೇವರೇ! ಹಾಗೆ ಹೇಳ್ಬೇಡಿ! ನಿಮ್ಮನ್ನ ಕಂಡ್ರೆ, ನನ್ನೊಡ್ಯಾ ನಿಮ್ಮ ಕಾಲ್ಕೆಳ್ಗೆ ಬಿದ್ದು ಹೊರಳಾಡೋಣಾ ಅಂತದೆ ಜೀವ!" ಎಂದು ಹೇಳಿ ನನ್ನ ಕಾಲು ಹಿಡಿದು ತನ್ನ ಹಣೆಯಿಂದ ಅದನ್ನು ಮುಟ್ಟುವುದರಲ್ಲಿದ್ದಳು. ನಾನು ಅಷ್ಟಕ್ಕೆ ಬಿಡದೆ ಅವಳನ್ನು ಎಬ್ಬಿಸಿ "ಸರಿ ಹಾಗಾದರೆ, ಎಲ್ಲಿ ನನ್ನ ಎದೇಮೇಲೆ ಕೈ ಇಟ್ಟು ಆಣೆ ಹಾಕು— 'ಇನ್ಮೇಲೆ ಈ ಕೆಲ್ಸ ಬಿಡ್ತೀನಿ' . . . ಅಂತ" ಎಂದು ಹೇಳಿದೆ.

ಚೆನ್ನಮ್ಮ ನನ್ನೆದೆಯ ಮೇಲೆ ಕೈ ಇಟ್ಟಳು. ಅವಳ ಮುಗ್ಧವಾದ ನೊಂದ ನೋಟ ನನ್ನ ಕಣ್ಣುಗಳನ್ನು ಹೊಕ್ಕು ಹೃದಯಕ್ಕಿಳಿಯಿತು. ನೊಂದ ನೋಟ—ನೊಂದ ಧ್ವನಿ. ಕಂಪಿಸುತ್ತ ಮೆಲ್ಲಗೆ ಹೇಳಿದಳು—

"ದೇವಾ—ಇನ್ಮೇಲೆ—ಈ ಕೆಲ್ಸಾ—ಮಾಡೋಕಿಲ್ಲ."

ನನ್ನ ಎದೆಯ ಮೇಲಿಂದ ಏನೋ ಭಾರವನ್ನು ಇಳಿಸಿದಂತಾಗಿ ದೊಡ್ಡದಾಗಿ ನಿಟ್ಟುಸಿರು ಬಿಟ್ಟೆ. ರಾತ್ರಿ ಬಹಳ ಹೊತ್ತಾಗಿಹೋಗಿತ್ತು. ಆದರೂ ನಿದ್ದೆ ಮಾತ್ರ ಬರುವಂತೆ ತೋರಲಿಲ್ಲ. ಮನದಲ್ಲಿ ಶಾಂತತೆ ಹರದಾಡತೊಡಗಿತು. ಚೆನ್ನಮ್ಮ ಒಂದು ಬಾರಿ ಆಕಳಿಸಿದಳು. ನನಗೆ ಅದೇ ನೆವವಾಗಿ "ಚೆನ್ನಾ, ಇನ್ನು ನೀನು ಹೋಗಿ ಮಲಗಿಕೊ" ಎಂದು ಹೇಳಿ ಎದ್ದೆ. ಅವಳೂ ಎದ್ದಳು. ಬಾಗಿಲವರೆಗೂ ಅವಳೊಡನೆ ಹೋಗಿ ನಾನೇ ಬಾಗಿಲನ್ನು ತೆಗೆದೆ. ಬಾಗಿಲಲ್ಲಿ ಪುನಃ ಅವಳ ಕೈಹಿಡಿದು ನನ್ನ ಕಡೆಗೆ ತಿರುಗಿಸಿಕೊಂಡು—"ಚೆನ್ನಾ, ಚೆನ್ನಾ, ದೇವರಾಣೆಗೂ ನನಗೆ ನಿನ್ನ ಮೇಲೆ ಸಿಟ್ಟಿಲ್ಲ—ಎಲ್ಲಿ—" ಎಂದು ಹೇಳಿ ನನ್ನೆರಡು ಕೈಗಳಿಂದಲೂ ಅವಳ ಮುಖವನ್ನು ಹಿಡಿದು, ಹಣೆಯ ಮೇಲೆ ಒಂದು ಮುತ್ತು ಕೊಟ್ಟೆ. ಚೆನ್ನಮ್ಮ ಹೊರಟುಹೋದಳು.

೬

ಇದ್ದಕ್ಕಿದ್ದ ಹಾಗೆಯೇ ಎಚ್ಚರವಾಯಿತು! ನೋಡಿದರೆ ಕರಿಯಪ್ಪನವರು! ಅವರೇ ಕೂಗಿ ಎಬ್ಬಿಸಿದ್ದು. ಅವರು ಒಳಗೆ ಹೇಗೆ ಬಂದರೋ ತಿಳಿಯಲಿಲ್ಲ. ಬಹುಶಃ ರಾತ್ರಿ ಬಾಗಿಲ ಅಗಣಿ ಹಾಕುವುದನ್ನು ಮರೆತಿದ್ದೆನೋ ಅಂದುಕೊಂಡೆ.

"ಏನು ಯಜಮಾನರೇ?" ಎಂದು ಕಣ್ಣು ಉಜ್ಜಿಕೊಳ್ಳುತ್ತ ಎದ್ದೆ.

"ಅಯ್ಯೋ? ಏನು ಹೇಳಲಿ ಸ್ವಾಮಿ! ಅಯ್ಯೋ ನನ್ನ ಕಂದಾ! ನನ್ನ ಚೆನ್ನಾ!—" ಎಂದು ಮಾತು ಪೂರೈಸದೆ ಕರಿಯಪ್ಪನವರು ಕೆಳಗೆ ಬಿದ್ದು ಉರುಳಾಡತೊಡಗಿದರು. ಏನೋ ಒಂದು ತರದ ಅವ್ಯಕ್ತವಾದ ಭೀತಿಯಿಂದ ನನ್ನ ಎದೆ ಬಿರಿದು ರಕ್ತ ಚಿಮ್ಮಿದ ಹಾಗಾಯಿತು. ಅಷ್ಟು ಹೊತ್ತಿಗೆ ಇನ್ನು ಯಾರೋ ಬಂದು "ಸ್ವಾಮಿ, ಚೆನ್ನಮ್ಮ ತೋಟದ ಬಾವಿಗೆ ಬಿದ್ದು . . ."

ಅವರು ಮಾತು ಪೂರೈಸುವ ತನಕ ನನ್ನ ಜೀವ ತಡೆಯಲಿಲ್ಲ. ಹಾಸಿಗೆಯಿಂದ ಎದ್ದವನೇ ಹುಚ್ಚನಂತೆ ತೋಟದ ಬಾವಿಯ ಕಡೆಗೆ ಓಡತೊಡಗಿದೆ! ಬಾವಿಯ ಹತ್ತಿರ ಹತ್ತು-ಹನ್ನೆರಡು ಜನ ಗುಂಪು ಕೂಡಿ ನಿಂತಿದ್ದುದು ಕಾಣಿಸಿತು. ಇನ್ನೂ ಜೀವವಿರಬಹುದೇನೋ ಎಂಬ ಒಂದು ಹುಚ್ಚು ಆಸೆ! ಅಯ್ಯೋ! ಹುಚ್ಚು ಆಸೆಯೇ ಸರಿ! ರಾತ್ರಿಯೇ ಅವಳು

ಹೋಗಿ ಬಿದ್ದಿರಬೇಕು—ಇಲ್ಲಿಯವರೆಗೂ ಜೀವ ಇರುವುದುಂಟೇ!—ಎಂಬ ನಿರಾಶೆ! ಹತ್ತಿರ ಹೋಗಿ ನಿಂತೆ. ಎಲ್ಲರೂ ದಾರಿಬಿಟ್ಟರು. ನೋಡಿದೆ! ಅಯ್ಯೋ! ಭಗವಂತಾ! ಅದೆಂತಹ ನೋಟವನ್ನು ನೋಡಿದೆನೋ! ಎದೆಯ ರಕ್ತ ಕಣ್ಣಿನಲ್ಲಿ ಚಿಮ್ಮಿ ಬಂದಂತಾಯಿತು. ಕಣ್ಣುಗಳು ನಿಡಿದು ಕತ್ತಲೆ ಕವಿಯಿತು!

* * * *

ಅಷ್ಟೇ ನನಗೆ ಜ್ಞಾಪಕ. ಪುನಃ ನನಗೆ ಎಚ್ಚರವಾದಾಗ ಅಲ್ಲಿ ನಿಂತಿದ್ದವರಲ್ಲಿ ಒಬ್ಬಿಬ್ಬರು ನನ್ನ ತಲೆಗೂ ಮುಖಕ್ಕೂ ತಣ್ಣೀರೆರಚುತ್ತಿದ್ದರು. ನನ್ನ ಮೂಗಿನಿಂದ ರಕ್ತ ಹರಿದು ಬರುತ್ತಿತ್ತು. ನನಗೆ ಯಾವುದೂ ಲಕ್ಷ್ಯವಿಲ್ಲ. ಶವದ ಹತ್ತಿರ ಹೋಗಿ ಜೀವದ ಚಿಹ್ನೆ ಏನಾದರೂ ಇದೆಯೇ ಎಂದು ಬಹಳ ಆಸೆಯಿಂದ ನೋಡಿದೆ. ಅಯ್ಯೋ! ಸುಮ್ಮನೆ ಭ್ರಾಂತಿ! ನನ್ನ ಭ್ರಮೆಯನ್ನು ನೋಡಿ ನನಗೇ "ಅಯ್ಯೋ! ಹುಚ್ಚಾ!" ಅನ್ನಿಸಿತು. ಅವಳ ದೇಹದಲ್ಲಡಗಿದ್ದ ಆ ಅಮಲವಾದ ಹಿಮಕಣವು ಆಗಲೇ ಆರಿಹೋಗಿತ್ತು! ಪುಣ್ಯವು ಪಾಪದಿಂದ ಅಗಲಿಹೋಗಿತ್ತು! ಅಮೃತವು ಇಂಗಿಹೋಗಿ ಉಳಿದಿದ್ದುದು ವಿಷದ ಚರಟ!

ಇನ್ನು ಹೆಚ್ಚು ಹೊತ್ತು ಅಲ್ಲಿ ನಿಲ್ಲಲಾಗಲಿಲ್ಲ. ನಿದಾನವಾಗಿ ಮನೆಯ ಕಡೆ ನಡೆದೆ.

೭

ಅದೇ ದಿನ ಸಾಯಂಕಾಲ ನಾನು ಆ ಹಳ್ಳಿಯನ್ನು ಬಿಟ್ಟೆ. ಹೊರಡುವುದಕ್ಕೆ ಮುಂಚೆ ಚೆನ್ನಮ್ಮನ ಫೋಟೋವನ್ನು ಅವರ ಮನೆಯಲ್ಲಿ ಬಿಟ್ಟು ಬಂದೆ. ಅಂತಹ ಹುಡುಗಿಯನ್ನು ಕಳೆದುಕೊಂಡ ಅವರಿಗೆ ಆ ಛಾಯೆಯು ಏನು ಸಮಾಧಾನ ಕೊಟ್ಟೀತು?

ದಾರಿಯುದ್ದಕ್ಕೂ ಯೋಚನೆ. ಪೊಲೀಸಿನವರೇನೋ "ಆತ್ಮಹತ್ಯ" ಎಂದು "ರಿಕಾರ್ಡು" ಮಾಡಿಬಿಟ್ಟರು. ಆದರೆ ವಸ್ತುತಃ ನಾನೇ ಅವಳನ್ನು ಕೊಂದಹಾಗಾಯಿತು! ಏನು ಮಾಡಿದರೂ ಈ ಭಾವನೆ ನನ್ನನ್ನು ಬಿಡುವಂತೆ ತೋರಲಿಲ್ಲ. ನಾನು ಹೇಳಿದುದೆಲ್ಲಾ ಅವಳ ಮನಸ್ಸಿಗೆ ನಾಟಿ, ಇರುವುದಕ್ಕಿಂತ ಸಾಯುವುದೇ ಮೇಲಾಗಿ ತೋರಿರಬೇಕು. ನಾನು ಅವಳನ್ನು ನನ್ನ ಕೊಠಡಿಯಿಂದ ಹೊರಕ್ಕೆ ಕಳಿಸಿದಾಗ ಅವಳ ಹೃದಯ

ಪಾಪದಿಂದ ತುಂಬಿತ್ತೆಂದು ಈಗ ತೋರುತ್ತಿದೆ. ಈ ಯೋಚನೆ ಬಂದೊಡನೆಯೇ ನನ್ನ ಎದೆಯನ್ನು ಸೀಳಿ ಕಾದ ಸೀಸವನ್ನು ಹೊಯ್ದ ಹಾಗಾಗುವುದು! ನಾನು ಆ ಅವೇಳೆಯಲ್ಲಿ ಅವಳನ್ನು ಹೊರಕ್ಕೆ ಕಳಿಸದೆ ಇದ್ದಿದ್ದರೆ ಅವಳ ಸಾಯಬೇಕೆಂಬ ಸಂಕಲ್ಪ ದೂರವಾಗುತ್ತಿತ್ತೋ ಏನೋ!—ಬದುಕುತ್ತಿದ್ದಳೋ ಏನೋ! ಅವಳ ಮನಸ್ಸಿಗೆ ಜೀವನವನ್ನು ನೀಗಬೇಕೆಂಬ ಆಸೆಯನ್ನು ತಂದವನು ನಾನು; ಅದಕ್ಕೆ ಸಂಶಯವಿಲ್ಲ! ನನಗೆ ಏನು ಅಧಿಕಾರವಿತ್ತು? ಅವಳ ಧರ್ಮ-ಅಧರ್ಮಗಳನ್ನು ತುಲನೆ ಮಾಡುವುದಕ್ಕೆ ನಾನು ಯಾರು? ನನ್ನ ಮಾತುಗಳು ಒಂದೊಂದೂ ಅವಳನ್ನು ಬಾವಿಯವರೆಗೂ ತಳ್ಳಿಕೊಂಡು ಹೋಗಿರಬೇಕು. ಆ ಮೇಲೆ ಅವಳನ್ನು ಬಾವಿಗೆ ತಳ್ಳಿದ್ದೂ ನನ್ನ ಮಾತುಗಳೇ—ನಾನೇ! ಅಯ್ಯೋ! ನಾನೇ ಅವಳನ್ನು ಕೈಯಾರೆ ಕೊಂದಹಾಗಾಯಿತಲ್ಲಾ! ದೇವರ ಎದುರಿನಲ್ಲಿ ಇದಕ್ಕೆ ಒಂದಲ್ಲ ಒಂದು ದಿನ ಉತ್ತರ ಹೇಳಬೇಕು. ಏನು ಹೇಳಲಿ? . . .

ಯೋಚನೆಗಳಿಗೆ ತಡೆಯೇ ಇಲ್ಲ.

ನಾಳೆ ಊರು ಸೇರುತ್ತೇನೆ. ಈ ಕಥೆಯನ್ನೆಲ್ಲಾ ಹೇಳಿದರೆ ಏನನ್ನುವಳೋ ನನ್ನ ಲಕ್ಷ್ಮಿ!

# ಬದುಕು !

ಕಿಕ್ಕಿರಿ ತುಂಬಿದೆ ಭೂಮಿಯ ಕಣಜ | ಕಕ್ಕಸಬಡುತಿದೆ ಬೊಕ್ಕಸದೊಡಲು |
ಬರಿದೋ ಬರಿದು ! ತೆರವೋ ತೆರವು ! | ಬಡವರ ಬಗ್ಗರ ತುತ್ತಿನ ಚೀಲಾ |

—ಅಂಬಿಕಾತನಯದತ್ತ

೧

ಶನಿವಾರ ಸಾಯಂಕಾಲ. "ಕಬ್ಬನ್ ಪಾರ್ಕಿ"ನಲ್ಲಿ "ಬ್ಯಾಂಡು." ಜನಗಳು ವಿಶೇಷವಾಗಿ ನೆರೆದಿದ್ದರು. ನಾನಾ ತರದ—ನಾನಾ ಜಾತಿಯ—ನಾನಾ ವೇಷಗಳ—ವಿವಿಧ ವಯಸ್ಸಿನ ಗಂಡಸರೂ ಹೆಂಗುಸರೂ ಹುಡುಗರೂ ಅನೇಕ ತರದ ಉದ್ದೇಶಗಳಿಂದ ಅಲ್ಲಿ ಸುಳಿದಾಡುತ್ತಿದ್ದರು. ಕೆಲವರಿಗೆ ವಾದ್ಯವನ್ನು ಕೇಳಲಪೇಕ್ಷೆ ! ಕೆಲವರಿಗೆ ಕೇಳಲು ಬಂದವರನ್ನು ಕಣ್ಣು ತುಂಬಾ ನೋಡುವ ಆಸೆ ! ಇನ್ನು ಕೆಲವರಿಗೆ ತಮ್ಮ ಹೊಸ ಉಡುಪಿನ ವೈಖರಿಯನ್ನು ಸಾಧ್ಯವಾದಷ್ಟು ಜನರ ಮುಖಕ್ಕೆ ಬೀರುವ ಆಸೆ ! ಹೀಗೆ ನಾನಾ ಜನಗಳು—ನಾನಾ ಉದ್ದೇಶಗಳು.

ವಾದ್ಯವು ಪ್ರಾರಂಭವಾಗಿತ್ತು. ಜನಗಳು ವಾದ್ಯವೇದಿಕೆ (Band-Stand) ಯ ಸುತ್ತಲೂ ಗುಂಪುಗುಂಪಾಗಿ ಮಂದಗಮನದಿಂದ—ಪ್ರದಕ್ಷಿಣೆಯಾಗಿಯೋ ಅಪ್ರದಕ್ಷಿಣೆಯಾಗಿಯೋ ಸುತ್ತುತ್ತಿದ್ದರು.

ಹಾಗೆ ಸುತ್ತುತ್ತಿದ್ದವರಲ್ಲಿ ಇಬ್ಬರದ್ದೇ ಒಂದು ಗುಂಪು. ಇಬ್ಬರೂ ಯುವಕರು. ಅವರಲ್ಲಿ ಒಬ್ಬನು ಸುಮಾರು ಐದೂವರೆ ಅಡಿ ಎತ್ತರದವನು. ಒಳ್ಳೆಯ ಮೈಕಟ್ಟು ; ಲಕ್ಷಣವಾದ ಕಳೆತುಂಬಿದ ಮುಖ ; ತೀಕ್ಷ್ಣವಾದ ಕಣ್ಣುಗಳು. ಪಕ್ಕಾ ಪಾಶ್ಚಾತ್ಯ ಉಡುಪನ್ನು ಧರಿಸಿದ್ದ. ನೋಡುವುದಕ್ಕೆ ಆಂಗ್ಲೇಯನ ಹಾಗೆ ಕಾಣಿಸದಿದ್ದರೂ "ಆಂಗ್ಲೋ-ಇಂಡಿಯನ್" (Anglo-Indian) ಎಂದರೆ ಒಪ್ಪುವ ಹಾಗಿದ್ದ. ಆದರೆ ಅವನು ಆ ಮಧ್ಯ ಜಾತಿಗೆ ಸೇರಿದವನಲ್ಲ. ನಮ್ಮ ಇಂಡಿಯಾ ದೇಶದವನೆ ! ಕರ್ಣಾಟಕದವನು ! ಮೈಸೂರಿನವನು !! ಅವನ ಜೊತೆಯವನು

ಆಕೃತಿಯಲ್ಲಿ ಸ್ವಲ್ಪ ಗಿಡ್ಡು ಆಸಾಮಿ. ಮೈಕಟ್ಟೂ ಪರವಾಗಿಲ್ಲ. ವರ್ಣ ಎಣ್ಣೆಗೆಂಪು ಅಂತಾರಲ್ಲ ಅದು. ಆದರೆ ಉಡುಪಿನಲ್ಲಿ ಮಾತ್ರ ಇವನಿಗೂ ಅವನಿಗೂ "ಇಮಾಂಸಾಬಿ—ಗೋಕುಲಾಷ್ಟಮಿ" ಸಂಬಂಧ. ಈತ ಧರಿಸಿದ್ದುದು ಆಪಾದಮಸ್ತಕವೂ ಶುದ್ಧ ಖಾದಿ ; ಒಂದು ಬಿಳಿಯ ಟೋಪಿ— ಒಂದು ಬಿಳಿಯ ಜುಬ್ಬ ; ಲುಂಗಿ ಬಿಳೀದು—ಉತ್ತರೀಯ ; ಅದೂ ಬಿಳೀದೆ. ಕಾಲಿಗೆ ನಯವಾದ ಮೆಟ್ಟು.

ಬಾರಿಸುತ್ತಿದ್ದ ಕೃತಿ ಕೊನೆಗಂಡು ವಾದ್ಯವು ನಿಂತಿತು. ಮಾತ ನಾಡುತ್ತ ಸುತ್ತುತ್ತಿದ್ದ ಈ "ಸ್ವದೇಶಿ—ಪರದೇಶಿ"ಗಳಿಬ್ಬರೂ ಬರಿದಾಗಿದ್ದ ಒಂದು ಶಿಲಾಪೀಠದ ಮೇಲೆ ಹೋಗಿ ಕುಳಿತುಕೊಂಡರು. ಅವರಿಗೆ ತಮ್ಮ ಮಾತಿನಲ್ಲೇ ಹೆಚ್ಚು ಗಮನ. ತಗ್ಗಿದ ದನಿಯಲ್ಲಿ ಮಾತನಾಡುತ್ತಿದ್ದರು. ಇವರು ಅಲ್ಲಿ ಕುಳಿತು ಐದು ನಿಮಿಷವಾಗುವುದರೊಳಗಾಗಿ ಅವರ ಸಮೀಪ ಪಕ್ಕೆ ಒಬ್ಬ ಹುಡುಗ ಬಂದು, ಅತಿ ಸಣ್ಣ ದನಿಯಲ್ಲಿ "ಸಾರ್" ಅಂದ. ಇಬ್ಬರೂ ಮಾತು ನಿಲ್ಲಿಸಿ ಅವನ ಕಡೆ ನೋಡಿದರು. ಸುಮಾರು ಹನ್ನೆರಡು ವರ್ಷದ ಹುಡುಗ ; ವಯಸ್ಸಿಗೆ ತಕ್ಕ ಬೆಳೆವಣಿಗೆ ಇಲ್ಲ—ತೆಳ್ಳಗೆ ಕಡ್ಡಿ ಕಡ್ಡಿಯಾಗಿದ್ದ. ಬತ್ತಿದ ಮುಖ ; ಬಡತನದ ಗೋಳನ್ನು ಉಗುಳುವ ಕಣ್ಣುಗಳು. ಹರಕಲು ಅಂಗಿ—ತೇಪೆ ತೇಪೆಯಾಗಿದ್ದ ನಿಕ್ಕರ್. ತಲೆಯ ಮೇಲೆ ಆಳತೆಗೆ ಮೀರಿದ ಹಳೆಯ ಫರ್‌ಕ್ಯಾಪ್ (fur-cap). ಕೈಯಲ್ಲಿ, ಬಾದಾಮಿಕಾಗದದಲ್ಲಿ ಸುತ್ತಿದ್ದ, ಚಪ್ಪಟೆಯಾದ ಒಂದು ಪೊಟ್ಟಣವನ್ನು ಹಿಡಿದಿದ್ದ. ಹುಡುಗ "ಸಾರ್" ಅಂದೊಡನೆಯೇ ಇಬ್ಬರೂ ಆ ಮೂರೂ ವರೆ ಅಡಿಯ ಬಡಕಲು ಪಿಳ್ಳೆಯನ್ನು ನೋಡಿದರು. ಇವರ ದೃಷ್ಟಿಯನ್ನು ನೋಡಿ ಹುಡುಗ ಮುಂದೆ ಮಾತನಾಡಲು ಸ್ವಲ್ಪ ಹಿಂತೆಗೆದ. ಖಾದಿ ಧರಿಸಿದ್ದವನು ಮುಗುಳು ನಗೆ ನಗುತ್ತ "ಏನೋ ಮಗು ?" ಎಂದು ಕೇಳಿದ. ಹುಡುಗನಿಗೆ ಸ್ವಲ್ಪ ಧೈರ್ಯ ಬಂತು.

"ಸಾರ್—ವಸ್ತ್ರ—ಹ್ಯಾಂಡ್ ಕರ್ಚೀಪ್ ಸಾರ್ . . . ಇದೆ, ಬೇಕೆ ?" ಎನ್ನುತ್ತ ಎರಡು ಹೆಜ್ಜೆ ಮುಂದಿಟ್ಟು ಪೊಟ್ಟಣವನ್ನು ಬಿಚ್ಚತೊಡಗಿದ.

ಖಾದಿವಾಲ—"ಎಲ್ಲಿ ತೆಗಿ ?"

ಹುಡುಗ ಕಾಗದವನ್ನು ಬಿಚ್ಚಿದ. ಅದರೊಳಗೆ ಎರಡು ದಪ್ಪವಾದ ರಟ್ಟಿನ ತುಂಡುಗಳು ; ಅವುಗಳ ಮಧ್ಯೆ ಚೆನ್ನಾಗಿ ಮಡಿಸಿದ ಆರೇಳು ಬಿಳೀ ಕರವಸ್ತ್ರಗಳಿದ್ದವು. ಹುಡುಗ ಅವುಗಳನ್ನು ಖಾದಿ ಧರಿಸಿದ್ದವನ

ಕೈಗೆ ಕೊಟ್ಟ. ಒಂದು ವಸ್ತ್ರವನ್ನು ಬಿಚ್ಚಿ ನೋಡಿದ ಖಾದಿವಾಲ. ವಸ್ತ್ರ ಚೆನ್ನಾಗಿತ್ತು. ಸುತ್ತಲೂ ಎಳೆತೆಗೆದು ಅಂಚುಗಟ್ಟಿ ಹೊಲಿಯಲ್ಪಟ್ಟಿತ್ತು. ಸ್ತ್ರೀಕೈವಾಡ ಚೆನ್ನಾಗಿಯೂ ಕಾಣುತ್ತಿತ್ತು. ಖಾದಿವಾಲ ಅದರ ಪರೀಕ್ಷೆಯಾದ ಮೇಲೆ ಹುಡುಗನನ್ನು ನೋಡುತ್ತ—

"ಮಗೂ, ಇದು ಯಾರು ಮಾಡಿದ್ದು ?"—ಎಂದು ಕೇಳಿದ.

"ನನ್ನ ಅಕ್ಕ ಮಾಡಿದ್ದು."

"ನೀನು ಯಾರ ಮಗನೋ—ಮಗು ?"

ಹುಡುಗ ಉತ್ತರಕೊಡಲಿಲ್ಲ. ಅವನ ಕಣ್ಣುಗಳಲ್ಲಿ ಏನೋ ಕಳವಳ.

"ಏನೋ ಮಗು, ನಿನಗೆ ತಂದೆತಾಯಿ ಇಲ್ಲವೆ ?"

"ಇದ್ದಾರೆ ಸಾರ್."

"ಯಾರು ? ಅವರ ಹೆಸರೇನು ?"

"ರಂಗಪ್ಪನೋರು—ಅಂತ."

"ಏನು ಕೆಲಸ ?"

ಹುಡುಗ ಪುನಃ ನೀರವ.

"ಕೆಲಸ ಇಲ್ಲವೆ ?"

"ನನಗೆ ಗೊತ್ತಿಲ್ಲ ಸಾರ್."

"ನಿನ್ನ ಹೆಸರೇನು ?"

"ನಂಜುಂಡ—ಸಾರ್."

"ನೀನು ಸ್ಕೂಲಿಗೆ ಹೋಗಲ್ಲವೆ ?"

"ಹೋಗ್ತಿದ್ದೆ ಸಾರ್—ಬಿಡಿಸಿಬಿಟ್ಟರು."

"ಯಾರು—ಬಿಡಿಸಿದವರು ?"

"ನಮ್ಮ ತಾಯಿ."

"ಯಾಕೆ ?"

"ಗೊತ್ತಿಲ್ಲ ಸಾರ್."

ಖಾದಿವಾಲ ದೊಡ್ಡದಾಗಿ ನಿಟ್ಟುಸಿರು ಬಿಟ್ಟ. ಹುಡುಗ—

"ವಸ್ತ್ರ ಬೇಡವೆ ಸಾರ್ ?" ಎಂದು ಕೇಳಿದ.

"ಎಷ್ಟು ಬೆಲೆ ಇದಕ್ಕೆ ಮಗು ?"

"ಒಂದಕ್ಕೆ ಎರಡೇ ಆಣೆ ಸಾರ್."

"ಬಹಳ ಹೆಚ್ಚು ಮಗು !"

" ಏನ್ ಸಾರ್—ನೀ-ವೇ—ಹಾಗೆ ಹೇಳಿದರೆ ! "

" ನೋಡು ಮಗು, ನಾನು ಖಾದಿ ಹೊರತು ಬೇರೆ ತೆಗೆದುಕೊಳ್ಳಲ್ಲ. ಈ ವಸ್ತ್ರ ಖಾದಿ ಅಲ್ಲ. " (ಸ್ನೇಹಿತನನ್ನು ಉದ್ದೇಶಿಸಿ) " ಏನಯ್ಯಾ, ಬೇಕೇನು ವಸ್ತ್ರ ? "

ಸ್ನೇಹಿತ ಮಾತನಾಡದೆ ತಲೆಯನ್ನಲ್ಲಾಡಿಸಿ ಬೇಡವೆಂದು ಸೂಚಿಸಿದ. ಹುಡುಗ ನಿರಾಶನಾದ. ದೈನ್ಯದಿಂದ" ಸಾರ್—ಒಂದನ್ನಾದರೂ ತಕ್ಕೊಳ್ಳಿ ಸಾರ್ " ಎಂದು ಬೇಡಿಕೊಂಡ.

ಖಾದಿವಾಲ—" ಇನ್ನ್ಯಾರನ್ನಾದರೂ ಕೇಳಪ್ಪ ಮಗು, ನಮಗೆ ಬೇಡ " ಎಂದು ಹೇಳಿ ಪೊಟ್ಟಣವನ್ನು ಹುಡುಗನಿಗೆ ಕೊಟ್ಟ.

" ಇವತ್ತು ಒಂದೂ ಖರ್ಚಾಗಲಿಲ್ಲ ಸಾರ್—ಬಹಳ ಸುತ್ತಿದೆ ! "

ಸ್ನೇಹಿತರಿಬ್ಬರೂ ಎದ್ದರು. ಹುಡುಗ ಪುನಃ " ಬೇಡವೆ ಸಾರ್ ? " ಎಂದು ಕೇಳಿದ.

" ಊಹುಂ " ಎಂದು ತಲೆಯನ್ನಲ್ಲಾಡಿಸಿದ ಖಾದಿಧಾರಿ.

" ಸಾರ್—ಒಂದೂ ಖರ್ಚಾಗದಿದ್ದರೆ—ನಾನು ಮಾರೋಕೇ ಹೋಗಿಲ್ಲ ಅಂತ ತಿಳಕೋತಾರೆ ಸಾರ್ ಮನೇಲಿ. ರಾತ್ರೆ—ಅನ್ನ—ಹಾಕೊಲ್ಲ ಸಾರ್. "

ಹುಡುಗನ ತುಟಿಗಳು ಕಂಪಿಸತೊಡಗಿದವು. ಕಣ್ಣುಗಳಲ್ಲಿ ನೀರು ತುಂಬಿ ಬಂತು. ಅವನ ಅವಸ್ಥೆಯು ಬಹಳ ಶೋಚನೀಯವಾಯಿತು. ಎಷ್ಟು ದೈನ್ಯತೆ ಆ ನೀರು ತುಂಬಿದ ಕಣ್ಣುಗಳಲ್ಲಿ—ಆ ನಿರಾಶೆಯ ದನಿಯಲ್ಲಿ—ಆ ಮೊರೂವರೆ ಅಡಿಯ ಜೀವಿಯಲ್ಲಿ !

ಖಾದಿವಾಲ—" ಇರಲಿ, ನಮ್ಮ ಜೊತೆಯಲ್ಲಿ ಬಾ " ಎಂದು ಹೇಳಿದ. ಮೂವರೂ " ಜಿ. ಆರ್. ಎಸ್. ಕಾಫಿಕ್ಲಬ್ " ಕಡೆ ಹೊರಟರು.

ಹುಡುಗ ಬಹಳ ಹಸಿದಿದ್ದ ಎಂದು ಕಾಣುತ್ತದೆ. ಸ್ನೇಹಿತರಿಬ್ಬರೂ ತಾವು ತಿಂಡಿ ತಿನ್ನುತ್ತ, ಹುಡುಗ ಸಾಕು ಅನ್ನುವವರೆಗೂ ತಿಂಡಿ ಕೊಡಿಸಿದರು. ಆಮೇಲೆ ಒಂದು ಎಂಟಾಣೆಗೆ ತಿಂಡಿ ಕಟ್ಟಿಸಿ, ಹುಡುಗನ ಕೈಗೆಕೊಟ್ಟು " ಇದನ್ನು ಮನೆಗೆ ತೆಗೆದುಕೊಂಡು ಹೋಗು " ಎಂದ ಖಾದಿವಾಲ. ಹುಡುಗ ಇವರ ಪರಿಯನ್ನು ನೋಡಿ ಮೂಕನಾಗಿ ಹೋಗಿದ್ದ. ತನ್ನ ಕೃತಜ್ಞತೆಯನ್ನು ಬಾಯಲ್ಲಿ ಹೇಳಲಾರದೆ ಕಣ್ಣುಗಳಲ್ಲಿ ತೋರಿಸಿದ.

" ಇನ್ನು ಮನೆಗೆ ಹೊರಡು " ಎಂದ ಖಾದಿವಾಲ.

" ಆಗಲಿ ಸಾರ್ " ಎಂದು ಹುಡುಗ ಹೆಜ್ಜೆಹೆಜ್ಜೆಗೂ ಹಿಂತಿರುಗಿ ಇವರನ್ನೇ ನೋಡುತ್ತ ಹೊರಟುಹೋದ.

* * * *

ಬ್ಯಾಂಡು ಮುಗಿದು ಜನರೆಲ್ಲಾ ಒಬ್ಬೊಬ್ಬರಾಗಿ ಹಿಂತಿರುಗುವುದರಲ್ಲಿದ್ದರು. ಖಾದಿವಾಲನೂ ಅವನ ಸ್ನೇಹಿತನೂ ಕಾಫಿಕ್ಲಬ್ಬಿನಿಂದ ನಡೆದು ಬಂದು, ಪುನಃ ಒಂದು ಶಿಲಾಸನದ ಮೇಲೆ ಕುಳಿತುಕೊಂಡರು. ಸುಮಾರು ಹತ್ತು ನಿಮಿಷ ಒಬ್ಬರೂ ಮಾತನಾಡಲಿಲ್ಲ. ಸೂಟು ಧರಿಸಿದ್ದವನು ಜೇಬಿನಿಂದ ಸಿಗರೇಟು ತೆಗೆದು ಹೊತ್ತಿಸುತ್ತ " ಏನಯ್ಯಾ ರಾಜು, ಮನಸ್ಸಲ್ಲೇ ಮಂಡಿಗೆ ಹಾಕ್ತಿದ್ದೀಯೆ ! " ಎಂದ.

" ಏನೂ ಇಲ್ಲ ; ಆ ಹುಡುಗನಿಗಾಗಿ ' ಅಯ್ಯೋ ' ಅನ್ನುತ್ತಿದ್ದೆ ! . . . ಹುಂ ! ಏನು ಪಾಪಿ ಬದುಕು ಆ ಹುಡುಗನದು ! "

" ಅಲ್ವೋ ರಾಜು, ಆ ಹುಡುಗನಿಗೆ ತಿಂಡಿಕೊಡಿಸಿದ್ದೇನೋ ಸರಿ, ಅರ್ಥವಾಯ್ತು ; ಆದರೆ—ಮನೆಗೆ ಕಟ್ಟಿಕಳಿಸಿದೆಯಲ್ಲ ಬುತ್ತೀನ . . ."

" ಅವನ ತಾಯಿತಂದೆಗಳು ತೀರ ಬಡವರಾಗಿರಬೇಕು."

" ಅಯ್ಯೋ ಹುಚ್ಚ ! ನೀನು ಒಂದು ದಿನ—ಒಂದು ಎಂಟಾಣೆ ತಿಂಡಿ ಕಳಿಸಿಬಿಟ್ಟರೆ ಅವರ ಬಡತನ ಹೋದ ಹಾಗಾಯ್ತೆ ? "

" ನಾನು ಹಾಗೆ ಎಣಿಸಲಿಲ್ಲ ನೀನು. ನಮ್ಮ ಕೈಲಾದಷ್ಟು ; ಅಷ್ಟೆ. ನನಗೆ ಆ ಮಗುವನ್ನು ನೋಡಿ ತಡೆಯಲಾರದ ಸಂಕಟವಾಯಿತು. ಅಲ್ಲಾ ನೀನು, ಬದುಕಿನ ಹೋರಾಟದಲ್ಲಿ ಆ ಎಂಟು ವರ್ಷದ ಎಳಕಲು ಜೀವಿಗೆ ಇರುವ ಸಾಧನಸಂಪತ್ತಿಯೇನು ? ನ್ಯಾಯವಾಗಿ, ಈ ವಯಸ್ಸಿನಲ್ಲಿ ಆ ಮಗು, ಯಾವ ಯೋಚನೆಯೂ ಇಲ್ಲದೆ, ಯಾವ ಭಾರವೂ ಇಲ್ಲದೆ, ನಿರಾತಂಕವಾಗಿ ಶಾಲೆಯಲ್ಲಿ ಇತರ ಮಕ್ಕಳೊಂದಿಗೆ ಆಡುತ್ತ ಪಾಠಗಳನ್ನು ಕಲಿಯಬೇಕು ! ಅದು ಬಿಟ್ಟು, ಈಗಾಗಲೆ ಆ ಪಿಳ್ಳೆಗೆ ಸಂಪಾದನೆಯ ಭಾರ ! . . . ಎಂತಹ ಬಡತನವಾಗಿರಬೇಕು ಅವರದು !! ವಸ್ತ್ರಗಳನ್ನು ಮಾರಿಕೊಂಡು ಹೋಗದೆ ಇದ್ದರೆ ತಾಯಿಯಾದವಳು ತನ್ನ ಸ್ವಂತ ಮಗುವಿಗೆ ಅನ್ನ ಹಾಕದಿರಬೇಕಾದರೆ, ಅದಿನ್ನೆಂತಹ ಪಾಪಿ ಬಡತನವಿರಬೇಕು ಅವರದು !! ನೀನು, ಇಂತಹುದು ನಮ್ಮ ಕಣ್ಣಿಗೆ ಬೀಳುವುದು ಒಂದಾದರೆ ಬೀಳದೆ ಇರುವುದು ನೂರು ! ಸಾವಿರ !! ಮೂರ್ತೀ, ಈ

ವಿಶಾಲಭಾರತದಲ್ಲಿ ಒಂದೊಂದು ತುಂಬಿದ ಹೊಟ್ಟೆಗೂ ಸಹಸ್ರ ಸಹಸ್ರ ಹಸಿದು ಬೆಂದ ಹೊಟ್ಟೆಗಳಿವೆ! ನೀನೂ, ಬಡತನದ ದಾಡೆಯಲ್ಲಿ ಸಾವು ಅನ್ನೃತ! . . . ಎಷ್ಟು ಕಳವು-ಮೋಸಿ, ಎಷ್ಟು ದರೋಡೆ—ಎಷ್ಟು ಆತ್ಮ ಹತ್ಯ—ಎಲ್ಲಕ್ಕೂ ಮೂಲ ಈ ಬಡತನ! ಈ ಹಾಳು ಬಡತನ ತೊಡೆದು ಹೋಗುವವರೆಗೂ ನಮಗೆ ನಿಸ್ತಾರವಿಲ್ಲ!! . . . ಹುಂ! ಅದಕ್ಕೆ ಒಂದೇ ಮಾರ್ಗ! . . ."

"ಅದೇನು?"

"ಕಮ್ಯೂನಿಸಮ್! (Communism)"

"ಸರಿ! ನೀನೊಬ್ಬ ಹುಚ್ಚ!"

"ನೀನು ಕುರುಡ!—ಕಿವುಡ!! ಇಲ್ಲದಿದ್ದರೆ ನೀನೂ ನನ್ನ ಹಾಗೆಯೇ ಹುಚ್ಚನಾಗುತ್ತಿದ್ದೆ ನೀನೂ! ಈ ನಿನ್ನ ವೇಷದಿಂದ ನಿನ್ನ ಪಿತೃಗಳಿಗೆ ಪುನರ್ಜನ್ಮವಿಲ್ಲ ಕಣಯ್ಯ!! ಹುಚ್ಚನಂತೆ ಹುಚ್ಚು!"

೨

ಒಂದು ವಾರ ಕಳೆದು ಪುನಃ ಶನಿವಾರ ಬಂತು. ಈ ದಿನವೂ ರಾಜಾ ರಾಯನೂ ಶ್ರೀನಿವಾಸಮೂರ್ತಿಯೂ ಕಬ್ಬನ್‌ಪಾರ್ಕಿನ ಕಡೆ ಹೊರಟರು. ಹೊರಡುವಾಗ ಸ್ವಲ್ಪ ಹೊತ್ತಾಗಿತ್ತು. ಹಿಂದಿನವಾರ ನಡೆದ ವಿಷಯ ವನ್ನೇ ಮಾತನಾಡುತ್ತ ಬರುತ್ತಿದ್ದರು. ಶ್ರೀನಿವಾಸಮೂರ್ತಿ "ನೋಡು ರಾಜು, ಬೇಕಾದರೆ ನಾನು ಪಂಥ ಕಟ್ಟುತ್ತೇನೆ—ಆ ಹುಡುಗ ಈಗಾಗಲೇ ಪಾರ್ಕಿಗೆ ಬಂದು ನನ್ನನ್ನೇ ಹುಡುಕುತ್ತಿದ್ದಾನೆ" ಎಂದ.

"ಅದೇಕೆ ಹಾಗೆ ಹೇಳುವೆ?"

"ತಿಂದು ತೇಗುವವರೆಗೂ ತಿಂಡಿ ಕೊಡಿಸುವುದೂ ಅಲ್ಲದೆ, ಮನೆಗೆ ಬೇರೆ ಎಂಟಾಣೆ ತಿಂಡಿ ಕೊಟ್ಟು ಕಳಿಸುವ ಪುಣ್ಯಾತ್ಮರು ಬಹಳ ಜನ ಬರೊಲ್ಲ ಕಬ್ಬನ್‌ಪಾರ್ಕಿಗೆ!"

"ನನ್ನ ಆತ್ಮದ ಪುಣ್ಯ ಅಷ್ಟರಲ್ಲೇ ಇದೆ!"

"ಹಾಗಾದರೆ 'ಗುಗ್ಗುಗಳು' ಅಂತ ಇಟ್ಟುಕೊ!"

ಪಾಪಿಗಳಿಗಿಂತ ಗುಗ್ಗುಗಳು ಶ್ರೇಷ್ಠ!"

* * * *

ಇಬ್ಬರೂ ವಾದ್ಯವೇದಿಕೆಯ ಸಮೀಪಕ್ಕೆ ಬಂದರು. ಆ ವೇಳೆಗೆ

ವಾದ್ಯವು ಮುಕ್ತಾಯವಾಗಿತ್ತು. ರಾಜು ಸೀನು ಇಬ್ಬರೂ ಮೆಲ್ಲಗೆ ಅಠಾರಾ ಕಚೇರಿಯ ಕಡೆ ಹೊರಟರು. ನಾಲ್ಕು ಹೆಜ್ಜೆ ಇಡುವುದರೊಳಗಾಗಿ ಅವರ ಹಿಂದೆ, ಕುಗ್ಗಿದ ದನಿಯಲ್ಲಿ “ ಸಾರ್ ” ಅಂದ ಹಾಗಾಯಿತು. ಇಬ್ಬರೂ ನಿಂತು ತಿರುಗಿದರು. ಆ ಹುಡುಗ! ಮೂರ್ತಿ ರಾಜನ ಮುಖ ನೋಡುತ್ತ ಮುಗುಳ್ನಗೆ ನಕ್ಕ. ರಾಜನಿಗೆ ಆ ಹುಡುಗನನ್ನು ನೋಡಿ ಒಳಗೊಳಗೆ ಸಂತೋಷವಾಯಿತಾದರೂ ಅದನ್ನು ತೋರ್ಪಡಿಸಿಕೊಳ್ಳದೆ “ ಏನೋ ಮಗು ? ” ಎಂದು ದಯೆ ತುಂಬಿದ ದನಿಯಿಂದ ಕೇಳಿದ.

“ ನಿಮ್ಮನ್ನೇ ಹುಡುಕುತ್ತಿದ್ದೆ ಸಾರ್ ” ಅಂದ ಹುಡುಗ.

ಅವನ ಕೈಯಲ್ಲಿ ಹಿಂದಿನಂತೆಯೇ ಒಂದು ಪೊಟ್ಲ ಇತ್ತು. ಅಲ್ಲದೆ ಅದರ ಜೊತೆಗೆ ಇನ್ನೊಂದು ಸಣ್ಣ ಪೊಟ್ಲವೂ ಇತ್ತು. ರಾಜನಿಗೆ ಇಂದು ಆ ಹುಡುಗನ ಸಂತೋಷಕ್ಕಾದರೂ ಒಂದು ವಸ್ತ್ರವನ್ನು ಕೊಳ್ಳಬೇಕೆಂದು ಆಸೆಯಾಯಿತು. ಜೇಬಿನಿಂದ ದುಡ್ಡು ತೆಗೆಯುತ್ತ “ ಎಲ್ಲಿ ಮಗೂ—ಒಂದು ವಸ್ತ್ರಕೊಡು ನನಗೆ ” ಎಂದ. ಹುಡುಗ ತನ್ನ ಕೈಲಿದ್ದ ಚಿಕ್ಕ ಪೊಟ್ಲವನ್ನು ಅವನ ಕೈಗೆ ಕೊಟ್ಟ. ರಾಜ ಬಿಚ್ಚಿ ನೋಡಿದ. ಒಂದು ಅತಿ ನಯವಾದ—ಸೊಗಸಾದ ರೇಷ್ಮೆ ವಸ್ತ್ರ—ಗುಲಾಬಿ ಬಣ್ಣದ್ದು. ಅದರ ಒಂದು ಮೂಲೆಯಲ್ಲಿ ಒಂದು ಹೂವು. ಆ ಹೂವಿನ ಮೇಲೆ ಹಾರಾಡುತ್ತಿರುವಂತೆ ಒಂದು ಪತಂಗ. ಕಸೂತಿಯ ಕೆಲಸ ಬಹಳ ಚೆನ್ನಾಗಿತ್ತು. ಹೌದೋ ಅಲ್ಲವೋ ಅನ್ನುವ ಹಾಗೆ ಒಂದು ಪರಿಮಳವನ್ನು ಸೂಸುತ್ತಿತ್ತು. ರಾಜ ವಸ್ತ್ರವನ್ನು ಪ್ರಶಂಸೆಮಾಡುತ್ತ, ಹುಡುಗನನ್ನು ನೋಡಿ “ ಏನಪ್ಪಾ ಮಗು, ಒಳ್ಳೇ ಭಾರೀದನ್ನೇ ಕೊಟ್ಟುಬಿಟ್ಟೆ! ಏಷ್ಟು ಬೆಲೆ ಇದಕ್ಕೆ ? ” ಎಂದು ಕೇಳಿದ.

“ ‘ ದುಡ್ಡು ತಕೋಬೇಡ—ಹಾಗೆ ಕೊಡು ’—ಅಂದರು ಸಾರ್.”

ರಾಜನಿಗೆ ಆಶ್ಚರ್ಯವಾಯಿತು. ಮೂರ್ತಿಯ ಮುಖವನ್ನು ನೋಡಿದ. ಮೂರ್ತಿ ಮಾತನಾಡಲಿಲ್ಲ; ಸುಮ್ಮನೆ ಕಣ್ಣು ಮಿಟಿಕಿಸಿದ ಅಷ್ಟೆ. ರಾಜ ಹುಡುಗನನ್ನು ನೋಡಿ “ ಯಾರು ಅಂದದ್ದು ಹಾಗೆ ? ” ಎಂದು ಕೇಳಿದ.

“ ನಮ್ಮ ತಾಯಿ.”

ತಿಂಡಿ ಕೊಟ್ಟು ಕಳಿಸಿದುದಕ್ಕಾಗಿ ಕೃತಜ್ಞತೆಯ ಸೂಚನೆ ಇದು—ಅಂದುಕೊಂಡ ರಾಜ. ವಸ್ತ್ರವನ್ನು ಇಟ್ಟುಕೊಂಡು “ ಇರಲಿ, ಇದು ವಸ್ತ್ರಕ್ಕಲ್ಲ—ನಿನಗೆ ಇನಾಂ—ತಗೋ ” ಎಂದು ನಾಲ್ಕಾಣೆಯನ್ನು ಅವನ ಕೈಲಿ

ಹಾಕುವುದಕ್ಕೆ ಹೋದ. ಹುಡುಗ ಸ್ವಲ್ಪ ಹಿಂತೆಗೆದ. ರಾಜ "ಇರಲಿ ತಗೋ" ಎಂದು ಬಲವಂತದಿಂದ ಕೊಟ್ಟು "ಹೊರಡು, ನಿನ್ನ ತಾಯಿಗೆ ನನ್ನ ನಮಸ್ಕಾರ ಹೇಳು" ಎಂದ.

ಹುಡುಗ "ಸಾರ್—ಮತ್ತೆ—ಸಾರ್—ನಿ-ಮ್ಮ-ನ್ನ . . ." ಎಂದು ತೊದಲುತ್ತ ಅರ್ಧದಲ್ಲಿಯೇ ನಿಲ್ಲಿಸಿದ.

ರಾಜ—"ಏನು ಮಗು? ಪರವಾಗಿಲ್ಲ, ಹೇಳು" ಎಂದು ಪ್ರೋತ್ಸಾಹಿಸಿದ.

"ನಿಮ್ಮನ್ನ ಕ-ರ-ಕೊಂ-ಡು ಬಾ ಅಂದರು ಸಾರ್."

ರಾಜನಿಗೆ ಪುನಃ ಆಶ್ಚರ್ಯ! ಅವನು ಪುನಃ ಮೂರ್ತಿಯ ಮುಖವನ್ನು ನೋಡಿದ. ಮೂರ್ತಿ ಸಿಗರೇಟಿನ ಹೊಗೆಯನ್ನು ಮೂಗಿನಲ್ಲಿ ಬಿಡುತ್ತ, ಕಣ್ಣು ಮುಚ್ಚಿಕೊಂಡು ಮುಗುಳ್ನಗೆ ನಗುತ್ತಿದ್ದ.

ರಾಜ—"ಯಾರೋ ಮಗು ಬರಹೇಳಿದವರು?"

"ನಮ್ಮ ತಾಯಿ ಸಾರ್."

"ಯಾಕೋ ಮಗು?"

"ನನಗೆ ಗೊತ್ತಿಲ್ಲ ಸಾರ್."

ಅರ್ಧ ಮೂರ್ತಿೀನ ಕೇಳಿದ ಹಾಗೂ ಅರ್ಧ ತನ್ನಷ್ಟಕ್ಕೆ ತಾನೇ ಪ್ರಶ್ನೆ ಹಾಕಿಕೊಂಡ ಹಾಗೂ "ಯಾಕಿರಬಹುದು?" ಎಂದ. ಮೂರ್ತಿ ಅದುವರೆಗೆ ಸುಮ್ಮನಿದ್ದವನು ಆಗ "ಹೋದರೆ ತಾನೇ ತಿಳಿಯುತ್ತೆ!" ಅಂದ. ರಾಜನಿಗೂ ಆ ಹುಡುಗನ ಮನೆಗೆ ಹೋಗಬೇಕೆಂಬ ಆಸೆ ಹುಟ್ಟಿತ್ತು. ಮೂರ್ತಿಯ ಮಾತಿನಿಂದ ಆ ಆಸೆಗೆ ಪ್ರೋತ್ಸಾಹ ಸಿಕ್ಕಿತು. "ಹೋಗೋಣವೆ?" ಎಂದ.

"ಹುಂ! ನಡಿ" ಎಂದ ಮೂರ್ತಿ.

ರಾಜ ಹುಡುಗನನ್ನು ನೋಡಿ "ಬರುತ್ತೇವೆ ನಡಿ; ನಿಮ್ಮ ಮನೆ ಎಲ್ಲಿದೆ?" ಎಂದು ಕೇಳಿದ.

"ಧರ್ಮರಾಯನ ಗುಡಿ ಹತ್ರ ಒಂದು ಓಣೀಲಿ ಸಾರ್."

"ನಡಿ, ಹೋಗೋಣ."

ಸಾಯಂಕಾಲ ಏಳು ಗಂಟೆಯಾಗಿತ್ತು. ಹುಡುಗ ಮುಂದೆ ಹೊರಟ. ಇವರಿಬ್ಬರೂ ಅವನನ್ನು ಹಿಂಬಾಲಿಸಿದರು.

* * * *

ರಾಜ ಬಡತನವನ್ನು ನೋಡುವುದಕ್ಕೆ ಹೊರಟಿದ್ದ ! ಆ ಹುಡುಗನ ತಾಯಿತಂದೆ—ಅವರ ಬಡತನ—ಅವರ ಕಷ್ಟಗಳು—ಅವರ ನೂರಾರು ಗೋಳುಗಳು ಇವುಗಳನ್ನೆಲ್ಲಾ ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತ ಹೋಗುತ್ತಿದ್ದ. "ಎಷ್ಟು ಕೃತಜ್ಞತೆ—ಆ ತಾಯಿಗೆ !" ಅಂದುಕೊಂಡ. "ಹಣಕ್ಕೆ ಬಡತನವಾದರೆ—ಗುಣಕ್ಕೆ ಸಿರಿತನ ! ಗುಣದ ಮುಂದೆ ಹಣ ಮಣ್ಣು ! ಆಕೆಯ ಗುಣದ ಸಾಕಾರದ ಹಾಗಿದೆ ಆಕೆ ಕಳಿಸಿದ ವಸ್ತ್ರ !" ಎಂದು ವಸ್ತ್ರವನ್ನು ತೆಗೆದು ಕೆನ್ನೆಗೆ ಒತ್ತಿಕೊಳ್ಳುತ್ತಾ "ಎಷ್ಟು ನಯವಾಗಿದೆ !—ಏನು ಕುಶಲತೆ !—ಎಂತಹ ಪರಿಮಳ ! . . . ಆ ತಾಯಿಯನ್ನು—ಆ ಗುಣಶ್ರೀಯನ್ನು ಹೇಗೆ ಮಾತನಾಡಿಸುವುದು ? . . . ಪಾಪ ! ಅವರದು ಎಂತಹ ಮನೆಯೋ ! ಅದು ಮನೆಯೋ ಗೋಳಿನ ಗೂಡೋ !! . . ." ಎಂದು ಮುಂತಾಗಿ ಯೋಚಿಸುತ್ತ ಹೊರಟ.

* * * *

ಸುಮಾರು ಏಳೂವರೆ ಗಂಟೆ ಹೊತ್ತಿಗೆ ಹುಡುಗ ಅವರನ್ನು ತನ್ನ ಮನೆಯ ಸಮೀಪಕ್ಕೆ ಕರೆದುಕೊಂಡುಹೋದ. ಆ ಮನೆ, ಹುಡುಗ ಹೇಳಿದ ಹಾಗೆ, ಒಂದು ಅತಿ ಇಕ್ಕಟ್ಟಾದ ಕತ್ತಲಾದ ಓಣಿಯಲ್ಲಿತ್ತು. ಬಚ್ಚಲು ಮೋರಿಯ ವಾಸನೆ, ಮ್ಯುನಿಸಿಪಾಲಿಟಿಯ ಕೀರ್ತಿಕುಸುಮದ ಪರಿಮಳವೋ ಎಂಬಂತೆ ತಾನೇ ತಾನಾಗಿ ಮೂಗಿಗೆ ಅಡರುತ್ತಿತ್ತು. ಹುಡುಗ ಅವರನ್ನು ನಡು ಓಣಿಯಲ್ಲಿ ನಿಲ್ಲಿಸಿ "ಸಾರ್ ಸ್ವಲ್ಪ ಇರಿ ; ನಮ್ಮ ತಾಯಿಗೆ ಹೇಳಿ ಬರ್ತೇನೆ" ಎಂದು ಹೇಳಿ, ನಾಲ್ಕು ಮಾರು ಮುಂದಕ್ಕೆ ಹೋಗಿ, ಬಲಗಡೆ ಒಂದು ಬಾಗಿಲನ್ನು ತಟ್ಟಿದ. ಆ ಮನೆಗೆ ಮುಂದುಗಡೆ ಆ ಬಾಗಿಲೊಂದೆ ; ಕಿಟಿಕಿಯಿಲ್ಲ. ಹುಡುಗ ತಟ್ಟಿದ ಒಂದೆರಡು ಕ್ಷಣಗಳಲ್ಲಿ ಬಾಗಿಲು ತೆರೆದು, ಅವನು ಒಳಗೆ ಹೋದ. ರಾಜ ಮೂರ್ತೀನ ಕುರಿತು "ಲೋ, ನರಕದ ವರ್ಣನೆಗೆ ಒಳ್ಳೇ ಮಾದರಿ ಈ ಜಾಗ—ಅಲ್ವೆ ?" ಎಂದ. ಮೂರ್ತಿ ಮುಖಕ್ಕೆ ಮುತ್ತುತ್ತಿದ್ದ ಸೊಳ್ಳೆಗಳ ಹಿಂಡನ್ನು ಕೈಬೀಸಿ ಓಡಿಸುತ್ತ "ನೋಡಿದೆಯಾ, ಈ ಸೊಳ್ಳೆಗಳನ್ನ ! ಯಾರೋ ಹೊಸಬರು—ಅಂತ ಎಷ್ಟು ಉಪಚಾರ !" ಎಂದ. ಇದ್ದಕ್ಕಿದ್ದ ಹಾಗೆಯೇ ಗುರ್-ಗುರ್-ಗುರ್—ಎಂದು ಸದ್ದಾಯಿತು ಮೋರೀಲಿ. ರಾಜ ಬೆಚ್ಚಿಬಿದ್ದ. ಮೂರ್ತಿ "ಹೆಗ್ಗಣ ಅಷ್ಟೆ ! ಸಾಧುವಾದ ಪ್ರಾಣಿ—ಹೆದರಬೇಡ !" ಎಂದ. ಆಗಾಗ ಆ ಕತ್ತಲಾದ ಓಣಿಯಲ್ಲಿ ಅತ್ತಲಿಂದ ಇತ್ತ

ಲಾಗಿ, ಇತ್ತಲಿಂದ ಅತ್ತಲಾಗಿ ಸುಳಿದಾಡುತ್ತಿದ್ದ ಜನರು ಯಾವುದೋ ಹಾಳು ಊರಿನಲ್ಲಿ ದಾರಿತಪ್ಪಿ ಅಲೆಯುತ್ತಿದ್ದ ಪ್ರೇತ ಜೀವಿಗಳಂತೆ ತೋರುತ್ತಿದ್ದರು.

ಹುಡುಗ ಇವರನ್ನು ಬಹಳ ಹೊತ್ತು ಕಾಯಿಸಲಿಲ್ಲ. ಐದು ನಿಮಿಷದೊಳಗಾಗಿಯೇ ಓಡಿಬಂದು "ಬನ್ನಿ ಸಾರ್" ಅಂದ. ಇಬ್ಬರೂ ಅವನನ್ನು ಹಿಂಬಾಲಿಸಿ ಮನೆಯನ್ನು ಹೊಕ್ಕರು. ಇವರು ಬಾಗಿಲೊಳಗೆ ಹೋಗುತ್ತಿದ್ದ ಹಾಗೆಯೇ ಒಳಬಾಗಿಲಲ್ಲಿ ಒಬ್ಬಾಕೆ—ಸುಮಾರು ಮೂವತ್ತು ಮೂವತ್ತೈದು ವರ್ಷಗಳಿರಬಹುದು—ಇವರನ್ನು ನೋಡಿ, ಸರಿಯಾಗಿದ್ದ ಸೆರಗನ್ನು ಇನ್ನೂ ಸ್ವಲ್ಪ ಸರಿಮಾಡಿಕೊಳ್ಳುತ್ತ, ಒಂದು ತರದ ಮುಗುಳುನಗೆಯಿಂದ ಆಪಾದಮಸ್ತಕವೂ ಬಳುಕುತ್ತ "ದಯಮಾಡಿ" ಎಂದಳು. ರಾಜ ಸ್ವಲ್ಪ ಅಪ್ರತಿಭನಾದ! ಅವನು ನಿರೀಕ್ಷಿಸಿದ್ದು ಮನೆಯ ಯಜಮಾನನನ್ನು! ಒಂದು ಸಲ ಉಗುಳು ನುಂಗಿದ. ಆಕೆ ಇವರನ್ನು ಎಡಗಡೆ ಇದ್ದ ಕೊಠಡಿಯೊಳಕ್ಕೆ ಕರೆದೊಯ್ದಳು. ರಾಜನ ನಿರೀಕ್ಷೆಗೆ ಮೊದಲ ಪೆಟ್ಟು ಬಿತ್ತು! ಅವನು ಅವರ ವಿಷಯದಲ್ಲಿ ಮುಂಗಡವಾಗಿ ಕಲ್ಪಿಸಿಕೊಂಡಿದ್ದ ಚಿತ್ರ ಮಾಸತೊಡಗಿತು! ಅವನು ಎಣಿಸಿದಷ್ಟು ಬಡತನದ ಕುರುಹು ಆ ಕೊಠಡಿಯಲ್ಲಿ ಕಂಡುಬರಲಿಲ್ಲ. ಅಲ್ಲಿ ಒಂದು ಮೇಜು—ನಾಲ್ಕೈದು ಕುರ್ಚಿಗಳು—ಒಂದು ಹಳೆಯ ಸೋಫಾ ಇಷ್ಟು ಇದ್ದುವು. ಅವುಗಳ ಮೇಲೆಲ್ಲಾ ತರತರವಾಗಿ ಕಸೂತಿಕೆಲಸ ಮಾಡಿದ್ದ ರಂಗುರಂಗಿನ ಬಟ್ಟೆಗಳಿದ್ದುವು. ಗೋಡೆಗಳ ಮೇಲೆ ನಾನಾ ತರದ ಚಿತ್ರಗಳು ಕಂಗೊಳಿಸುತ್ತಿದ್ದುವು. ಮೇಜಿನ ಮೇಲೆ ನಾಜೂಕಾದ ಒಂದು ಗಾಜಿನ ಪುಷ್ಪಪಾತ್ರೆ—ಅದರ ಪಕ್ಕದಲ್ಲಿಯೇ ಒಂದು ಸಣ್ಣ ಫೋಟೊ. ಕೊಠಡಿಗೆ ಇವರು ಪ್ರವೇಶಿಸಿದ ಬಾಗಿಲ ಮೇಲಿನ ಗೋಡೆಯಲ್ಲಿ ಒಂದು 'ಎಲೆಕ್ಟ್ರಿಕ್' ದೀಪ, ಆ ಕೊಠಡಿಗೆ ಹೋಗುತ್ತಿದ್ದ ಹಾಗೆ ಬಲಗಡೆ ಗೋಡೆಯಲ್ಲಿ—ಒಂದು ಕಡೆಯ ಮೂಲೆಗೆ ಸಮೀಪವಾಗಿ—ಇನ್ನೊಂದು ಬಾಗಿಲು; ಅರ್ಧ ತೆರೆದಿತ್ತು. ಅದರ ಒಳಭಾಗಕ್ಕೆ ತೆಳುವಾದ ತೆರೆಯೊಂದು ಅರ್ಧ ಓರೆಯಾಗಿತ್ತು. ಆ ಕೊಠಡಿಯಲ್ಲೂ ಒಂದು ದೀಪ—ಅರುಣರಾಗವನ್ನು ಬೀರುತ್ತಿತ್ತು. ಆ ಅರೆತೆರೆದ ಬಾಗಿಲ ಮೂಲಕ ಒಂದು ದೊಡ್ಡ ಮಂಚದ ಸ್ವಲ್ಪ ಭಾಗವೂ ಒಂದೆರಡು ದೊಡ್ಡ ಪಠಗಳೂ (ಸಾಧಾರಣವಾಗಿ ಆಯುಷ್ಕರ್ಮಶಾಲೆಯಲ್ಲಿ ಅಂತಹ ಪಠಗಳನ್ನು ನೋಡಬಹುದು!)

ಕಾಣಿಸುತ್ತಿದ್ದವು. ಇವರು ಇದ್ದ ಕೊಠಡಿಯಲ್ಲಿ ಒಂದೆರಡು ಕಡೆಯಿಂದ, ಹಚ್ಚಿದ ಊದುಕಡ್ಡಿಯ ಪರಿಮಳವು ಸನ್ನಿವೇಶಕ್ಕೆ ಒಂದು ರಂಗನ್ನು ಕೊಡುತ್ತಿತ್ತು.

ಆಕೆಯು ಇವರನ್ನು ಮೇಜಿಗೆ ಸಮೀಪವಾಗಿದ್ದ ಸೋಫಾದ ಮೇಲೆ ಕುಳಿತುಕೊಳ್ಳ ಹೇಳಿ, ತಾನೂ ಮೇಜಿನ ಇನ್ನೊಂದು ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡಳು. ಇವರಿಬ್ಬರೂ ಸೋಫಾದ ಮೇಲೆ ಕುಳಿತುಕೊಂಡರು. ರಾಜ ಸಿಂಹಾವಲೋಕನ ದೃಷ್ಟಿಯಿಂದ ಒಂದು ಸಲ ಕೊಠಡಿಯ ಅಲಂಕಾರವನ್ನೆಲ್ಲಾ ನೋಡಿದ. ಈ ವೇಳೆಗೆ ಅವನು ಮೊದಲೇ ಕಲ್ಪಿಸಿಕೊಂಡಿದ್ದ ಮನೋಚಿತ್ರವು ಸಂಪೂರ್ಣವಾಗಿ ಅಳಿಸಿಹೋಗಿತ್ತು ; ಇಲ್ಲಿ ಬಡತನದ ಸುಳಿವೇ ಇಲ್ಲ! ಒಳ್ಳೇ ಸಮೃದ್ಧಿವಂತರ ಹಾಗೆಯೇ ತೋರಿತು. ಎದುರಿಗೆ ಕುಳಿತಿದ್ದಾಕೆ, ರೂಪ ಒಂದಕ್ಕೇ ಅಲ್ಲ—ಹಣಕ್ಕೂ ಅಧಿಕಾರಿಣಿಯಂತೆ ತೋರಿಬಂದಳು. ರಾಜ ಏನೇನು ಮಾತನಾಡಬೇಕೆಂದು ಕಂಠಪಾಠಮಾಡಿಕೊಂಡಿದ್ದನೋ ಅದೊಂದೂ ಈಗ ಜ್ಞಾಪಕಕ್ಕೆ ಬರಲಿಲ್ಲ. ರಂಗಸ್ಥಳದಲ್ಲಿ ಮಾತು ಮರೆತ ಹೊಸ ನಟನಂತೆ ಆಗಿತ್ತು ಅವನ ಅವಸ್ಥೆ ! ಮೂಕನಾಗಿ ಉಗುಳು ನುಂಗುತ್ತ ಕುಳಿತುಬಿಟ್ಟ ಧೀರ ! ಇವರ ಮೌನವನ್ನು ನೋಡಿ ಆಕೆ ಒಂದು ಸಲ ರಾಜನನ್ನೂ ಒಂದು ಸಲ ಮೂರ್ತಿಯನ್ನೂ ನೋಡಿದಳು. ರಾಜನ ಮುಖದ ಮೇಲೆ ಹುಟ್ಟು ಮೂಗನ ಮುಖಮುದ್ರೆ! ಮೂರ್ತಿ ಮಾತ್ರ ಆಕೆಯ ದೃಷ್ಟಿಗೆ ಸೋಲಲಿಲ್ಲ. ಆಕೆಯೇ ಮೊದಲು ಮಾತನಾಡಿದಳು. ಎಡಗೈಯಿಂದ ಬಲಗೈಯ ಬೆರಳುಗಳನ್ನು ಹಿಸುಕಿಕೊಳ್ಳುತ್ತ, ಕ್ಷಣಕ್ಕೊಂದುಸಲ ತುದಿನಾಲಗೆಯಿಂದ ತುಟಿಗಳಿಗೆ ಮೆಲುನಗೆಯನ್ನು ಲೇಪಿಸುತ್ತ, ತಡೆತಡೆದು—

" ನೀವು—ದಯಮಾಡಿದ್ದು—ಒಹಾ-ಳ—ಸಂತೋಷ "—ಎಂದಳು.

ರಾಜನಿಗೆ ಏನು ಮಾತಾಡಬೇಕೋ ತಿಳಿಯಲಿಲ್ಲ. " ಆ-ಊ-ಇಹಿ ! " ಎಂದು, ಒಂದು ಸಲ ಉಗುಳು ನುಂಗಿ, ಹಲ್ಲುಕಿರಿದು ಬಿಟ್ಟ ! ಪಾಪ ಅವನು ಇಲ್ಲಿ ಬಂದದ್ದು ಶುಕಮುನಿ ದಾರಿತಪ್ಪಿ 'ಸದಾರಮೆ' ನಾಟಕವನ್ನು ಹೊಕ್ಕಂತಿತ್ತು ! ಅವನು ಬಾಯಿಪಾಠಮಾಡಿಕೊಂಡಿದ್ದ ಮಾತುಗಳೊಂದೂ ಈ ರೂಪಜೀವಿಗಳ ರಂಗದಲ್ಲಿ ಒಪ್ಪುವಂತಿರಲಿಲ್ಲ. ಅವನು "ಅಯ್ಯೋ ಪಾಪ ! " ಎಂದು ಕನಿಕರದಿಂದ ಅವರ ಗೋಳಿನಲ್ಲಿ ಭಾಗಿಯಾಗಿ ಸಂತೈಸುವುದಕ್ಕೆ ಬಂದಿದ್ದ. ಆದರೆ ಇಲ್ಲಿ ಬಂದು ನೋಡಲಾಗಿ

ಇವರಿಗೆ ಅವನ "ಅಯ್ಯೋ ಪಾಪ"ದ ಅವಶ್ಯಕತೆ ಇದ್ದಹಾಗೆ ಕಾಣ ಲಿಲ್ಲ. ಏನೂ ತೋರದೆ ರಾಜ ಮೂರ್ತಿಯ ಕಡೆ ನೋಡಿದ. ಮೂರ್ತಿ ಇವನು ನೋಡಿದುದನ್ನು ಲೆಕ್ಕಿಸದೆ, ಜೇಬಿನಿಂದ ಸಿಗರೇಟನ್ನು ತೆಗೆದು ಹೊತ್ತಿಸಿ, ಬಾಯ ತುದಿಯಿಂದ ಹೊಗೆಯನ್ನು ಬಿಡುತ್ತ, ಧೂಮಲೀಲೆ ಯಲ್ಲಿ ಮಗ್ನನಾದ. ರಾಜ ಇನ್ನು ಹೆಚ್ಚು ಹೊತ್ತು ಸುಮ್ಮನಿರಲಾಗದೆ ಏನೋ ಒಂದು ಸಂಕೋಚದಿಂದ "ನಿಮ್ಮ . . . ಇಹಿ ! . . . ನಿಮ್ಮ ಹುಡುಗ 'ಬರಹೇಳಿದರು' ಅಂದ ; ಇಹಿ ! ಅದಕ್ಕೇ . . ." ಎಂದು ಮಾತು ಪೂರೈಸದೆ ಪುನಃ ಹಲ್ಲುಕಿರಿದು ಬಿಟ್ಟ ! ಆಕೆ ಕೊರಳನ್ನು ಒಂದು ಸಲ ಒಳುಕಿಸಿ, ಮುಂಗುರುಳನ್ನು ತಿದ್ದಿಕೊಳ್ಳುತ್ತ, ಹಸನ್ಮುಖದಿಂದ "ನಮ್ಮ ಪುಣ್ಯ !" ಎಂದಳು. ಪುನಃ ಸ್ವಲ್ಪ ಹೊತ್ತು ಮೌನ—ಹುಚ್ಚು ಹಿಡಿಸುವ ಮೌನ ! ರಾಜನಿಗೆ ಹುಡುಗನ ತಂದೆಯ ವಿಷಯ ಜ್ಞಾಪಕಕ್ಕೆ ಒಂದು, ಮುಖದಲ್ಲಿ ಸ್ವಲ್ಪ ಕಳೆಯೇರಿತು. ಯಜಮಾನರ ಯೋಗಕ್ಷೇಮ ವಿಚಾರಿಸಬೇಕೆಂದು "ಎಲ್ಲಿ ರಂಗಪ್ಪನವರು ?" ಎಂದು ಕೇಳಿದ. ಆಕೆ ಆಶ್ಚರ್ಯದಿಂದ ಮುಗುಳ್ನಗೆ ನಗುತ್ತ "ಯಾವ ರಂಗಪ್ಪನವರು ?" ಎಂದು ಕೇಳಿದಳು. ಅವಳ ಈ ಪ್ರಶ್ನೆಯಿಂದ ರಾಜನಿಗೆ, ದಾರ ಸಲೀಸಾಗದೆ— ಎಂದು ಕಾಲಟ್ಟಾಗ ಮುಳ್ಳು ಚುಚ್ಚಿದಂತಾಯಿತು ! ಅವನೂ ಆಶ್ಚರ್ಯ ದಿಂದ—

"ಆ ಹುಡುಗ ನಿಮಗೆ ಏನಾಗಬೇಕು ?"—ಎಂದು ಕೇಳಿದ.

"ಅದೊಂದು ತಬ್ಬಲಿ ಮಗು ; ನಾನು ಸಾಕಿಕೊಂಡಿದ್ದೇನೆ."

"ನಿನ್ನ ತಂದೆ ಯಾರು—ಎಂದು ಕೇಳಿದಾಗ 'ರಂಗಪ್ಪನವರು' ಎಂದನಲ್ಲಾ !"

ಆಕೆ ಒಂದು ಸಲ ಬಳುಕಿದ ಹಾಗೆ ಮಾಡಿ, ನಗುತ್ತ "ಅಯ್ಯೋ, ಆ ತಬ್ಬಲೀಗೆ ಒಂದೂ ತಿಳೀದು ! ಅದಕ್ಕೆ ತಾಯಿತಂದೆ ಯಾರೂ ಇಲ್ಲ !" ಎಂದಳು.

ಮತ್ತೆ ಮುಳ್ಳು ಚುಚ್ಚಿದ ಹಾಗಾಯಿತು ರಾಜನಿಗೆ.

"ಇದೇನು ಹೀಗೆ ಹೇಳುವಿರಿ ! 'ನಮ್ಮ ತಾಯಿ ಬರಹೇಳಿದರು' ಎಂದನಲ್ಲಾ ಆ ಹುಡುಗ ?"

"ಮೊದಲಿಂದ ನಾನೇ ಸಾಕಿದವಳು ; ನನ್ನನ್ನೇ ತಾಯಿ—ಅಂತ ಕರಿತಾನೆ ಅಷ್ಟೆ."

ರಾಜನ ಮನಸ್ಸಿನಲ್ಲಿ ಕ್ಷಣಕಾಲ ಏನೋ ತೊಡಕಾಯಿತು. ಆಕೆಯನ್ನು ನೋಡುತ್ತ ಹುಬ್ಬುಗಂಟಿಕ್ಕಿ "ಹಾಗಾದರೆ—ಇಲ್ಲಿ—(ಉಗುಳು ನುಂಗಿ)—ಗಂಡಸರು ಯಾರೂ ಇಲ್ಲವೆ?" ಎಂದು ಕೇಳಿದ.

"ಇಲ್ಲದೆ ಏನು" ಎನ್ನುತ್ತ ನಕ್ಕಳು ಆಕೆ.

"ಯಾರು?"

"ನೀವೇ" ಎನ್ನುತ್ತ ಕೊರಳನ್ನು ಕೊಂಕಿಸಿ, ತುದಿನಾಲಗೆಯಿಂದ ಒಂದು ಸಲ ತುಟಿಯನ್ನು ಸವರಿಕೊಂಡಳು.

ಮೂರ್ತಿಯ ಹೊಟ್ಟೆಯಲ್ಲಿ ಹೊಗೆ—ನಗು ಎರಡೂ ಸೇರಿ ಅವನಿಗೆ ಕೆಮ್ಮು ಬಂತು. ರಾಜನಿಗೆ ಗಬಗಬ ತಿನ್ನುತ್ತಿರಬೇಕಾದರೆ ನೆತ್ತಿ ಹತ್ತುವುದು—ಅಂತಾರಲ್ಲ ಹಾಗಾಯ್ತು ಆಕೆಯ ಉತ್ತರದಿಂದ! ರಾಜ ಮತ್ತೊಂದು ಸಲ ಉಗುಳು ನುಂಗಿ, ಹಲ್ಲು ಕಿರಿಯುತ್ತ "ಅದು—ಹಿಹಿ!—ಸರಿ! ಮನೆಗೆ—ಹ್ಞ—ಯಜಮಾನರಾಗಿ (ಉಗುಳು ನುಂಗಿ) ಹಿಹಿ—ಒಬ್ಬರು—ಊ. . ." ಎಂದು ಮಾತು ಪೂರೈಸದೆ ನಿಲ್ಲಿಸಿದ. ಆಕೆ ಕೊರಳನ್ನು ಓರೆಮಾಡಿಕೊಂಡು, ಸೆರಗಿನ ತುದಿಯನ್ನು ಬೆರಳಿಗೆ ಸುತ್ತಿಕೊಳ್ಳುತ್ತ ಹೇಳಿದಳು—

"ಯಾರು—ದಯವಿಟ್ಟು—ನಮ್ಮ ಮನೆಗೆ ಬರ್ತಾರೋ ಅವರೇ . . . ; ಇವತ್ತು ನಿಮ್ಮ ದಯ ಇತ್ತು—ನಮ್ಮ ಪಾಲಿಗೆ . . . ನಮ್ಮ ಪುಣ್ಯ!"

ರಾಜ ಮುಂದೆ ಮಾತು ತೋರದೆ ಪುನಃ ಮೂರ್ತಿಯ ಕಡೆ ನೋಡಿದ. ಮೂರ್ತಿ ಈಗಲೂ ಅವನ ನೋಟಕ್ಕೆ ಲಕ್ಷ್ಯಕೊಡದೆ, ಜೇಬಿನಿಂದ ವಸ್ತ್ರ ತೆಗೆದು ಮುಖಕ್ಕೆ ಗಾಳಿಹಾಕಿಕೊಳ್ಳಲಾರಂಭಿಸಿದ. ರಾಜನಿಗೆ ಆಕೆ ಕಳಿಸಿದ್ದ ರೇಷ್ಮೆವಸ್ತ್ರದ ನೆನಪಾಯಿತು. ವಸ್ತ್ರವನ್ನು ಜೇಬಿನಿಂದ ತೆಗೆಯುತ್ತ 'ನೀವು ಕಳಿಸಿದ ವಸ್ತ್ರ ಬಹಳ ಚೆನ್ನಾಗಿದೆ!' ಎಂದ.

"ಏನೋ ಬಡವರ ಕಾಣಿಕೆ. ಅದು ನಮ್ಮ ಪುಟ್ಟಮಣಿ ಕೆಲಸ."

ಮೂರ್ತಿ ಇದುವರೆಗೂ ಒಂದು ಮಾತನ್ನೂ ಆಡಿರಲಿಲ್ಲ. ಅವನು ಮಾತನಾಡುವುದಕ್ಕೆ ಬಂದಿರಲಿಲ್ಲ; ತಮಾಷೆ ನೋಡುವುದಕ್ಕೆ ಬಂದಿದ್ದ. ಆದುವರೆಗೂ ಸುಮ್ಮನಿದ್ದವನು ಆಗ ಮುಂದಕ್ಕೆ ಬಗ್ಗಿ, ಮೇಜಿನ ಮೇಲಿದ್ದ ಫೋಟೋವನ್ನು ತೆಗೆದುಕೊಂಡು ಬೆಳಕಿಗೆ ಹಿಡಿದು ನೋಡತೊಡಗಿದ. ಅದನ್ನು ನೋಡಿ ಆಕೆ "ಅದೇ ನಮ್ಮ ಪುಟ್ಟಮಣೀದು—ಹೊಸ ಫೋಟೊ. ಮೊನ್ನೆ—ಹದಿನೆಂಟನೇ ಹುಟ್ಟಿದ ಹಬ್ಬದ ದಿನ ತೆಗೆಸಿದ್ದು. ಇನ್ನೂ ಒಂದು

ಪರವಾಗಿಲ್ಲ" ಎಂದಳು. ಫೋಟೋದಲ್ಲಿನ ಹುಡುಗಿ—ಹುಡುಗಿಯೇನು! —ಯುವತಿ, ಒಳ್ಳೆಯ ರೂಪಸಿಯಂತೆ ತೋರುತ್ತಿದ್ದಳು. ಇವರಿಬ್ಬರೂ ಫೋಟೋವಿನ ವಿಮರ್ಶೆಯಲ್ಲಿ ಮಗ್ನರಾಗಿರಲು, ಆಕೆ ಎದ್ದು ಒಳಗಿನ ಕೊಠಡಿಯೊಳಕ್ಕೆ ಹೋದಳು. ಮೂರ್ತಿ ಫೋಟೋವನ್ನು ಪುನಃ ಮೇಜಿನ ಮೇಲಿಟ್ಟು, ತನ್ನ ಬಲಮೊಳಕೈಯಿಂದ ರಾಜನ ಪಕ್ಕವನ್ನು ತಿವಿದ. ರಾಜ ಮೂರ್ತಿಯ ಸಮೀಪಕ್ಕೆ ಸರಿದು, ಅವನ ಮುಖವನ್ನೇ ನೋಡುತ್ತ, ಹುಬ್ಬುಗಂಟಿಕ್ಕಿ ತಗ್ಗಿದ ದನಿಯಲ್ಲಿ "ಇದೇನೋ—ಜನ, ಮೂರ್ತಿ—ಇವರು?" ಎಂದು ಕೇಳಿದ. ಮೂರ್ತಿ ಮಾತನಾಡಲಿಲ್ಲ; ಕಣ್ಣು ಮಿಟುಕಿಸಿದ. ರಾಜ ಪಾಪ, ಬಾಯಲ್ಲಿ ಬೆಟ್ಟು ಇಟ್ಟರೆ ಕಚ್ಚುವುದಕ್ಕೆ ಬರದಂತಹ ಸಾಧುವಾದ ಪ್ರಾಣಿ! ಅವನಿಗೆ ಮೂರ್ತಿಯ ಕಣ್ಣ ಭಾಷೆ ತಿಳಿಯದು. "ಏನೋ—ಹಾಗೆಂದರೆ?" ಎಂದ. ಮೂರ್ತಿ ಇವನ ಕಿವಿಯ ಹತ್ತಿರ ಬಾಯಿಟ್ಟು, ಪಿಸುಮಾತಿನಲ್ಲಿ "ಗೊತ್ತಾಗಲಿಲ್ಲೇನೋ ಬೆಪ್ತಕಡಿ! ಇವರು—ನಿತ್ಯಸುಮಂಗಲಿಯರು!" ಎಂದ.

"ಏನಂದೆ? ನಿತ್ಯ—"

"ಗುಗ್ಗೂ!—ಸೂಳೇರೋ!"

"ಏನಂದೆ?"

"ಮುಚ್ಚು ಬಾಯಿ! ತಮಾಷೆ ನೋಡು! ಗಲಾಟೆ ಮಾಡಬೇಡ! ಅಕ್ಕೊ!"

ಒಳಗಿನ ಕೊಠಡಿಯಲ್ಲಿ ಇವರನ್ನು ಎದುರುಗೊಂಡಳಲ್ಲಾ ಆಕೆಯ ಮಾತು ಕೇಳಿಸುತ್ತಿತ್ತು.

"ಬಾ, ಪುಟ್ಟೂ ಬಾ. ಇಷ್ಟು ನಾಚಿಕೆಯಾದರೆ ಹೇಗೆ! ಬಾ, ಮಣಿ—ಬಾ, ಬಾ!"

ಒಳಗಿನ ಕೊಠಡಿಯಿಂದ ಆಕೆ ಬಂದಳು. ಅವಳನ್ನು ಹಿಂಬಾಲಿಸಿ, ಕಸಬಿಗೆ ಬಂದ ಒಯ್ಯಾರವನ್ನೆಲ್ಲಾ ಬೀರುತ್ತ, ಎಡಗೈಯಲ್ಲಿ ತಾಂಬೂಲದ ತಟ್ಟೆಯನ್ನು ಹಿಡಿದು, ಬಲಗೈಯಿಂದ ಸೆರಗನ್ನೆಳೆದುಕೊಳ್ಳುತ್ತ ಬಂದಳು ಪುಟ್ಟಮಣಿ—ಹದಿನೆಂಟು ವರ್ಷಗಳ ಸಾಲಂಕೃತ ರೂಪಲಕ್ಷ್ಮಿ!

"ತಾಂಬೂಲ ಕೊಡು; ನಮಸ್ಕಾರ ಮಾಡು" ಎಂದಳು ಹಿರಿಯವಳು. ಪುಟ್ಟಮಣಿ ಇನ್ನೆರಡು ಹಜ್ಜೆ ಮುಂದಿಟ್ಟು—ಅಲ್ಲಾ—ತೇಲಿ ಬಂದು, ತಟ್ಟೆಯನ್ನು ಮೇಜಿನ ಮೇಲಿಟ್ಟು, ನಿರಿ ಸರಿಮಾಡಿಕೊಂಡು ಇಬ್ಬ

ರಿಗೂ ನಮಸ್ಕಾರಮಾಡಿ ಪುನಃ ತಾಯಿಯ ಹಿಂದುಗಡೆ ಹೋಗಿ ಒಂದು ಒಯ್ಯಾರದ ಬಳುಕಿನಲ್ಲಿ ನಿಂತಳು.

ಮೂರ್ತಿ 'ನೋಳ್ಕೆರೋ !' ಎಂದಾಗ ರಾಜನ ಮೈ ನಡುಗಿ ಬೆವರು ಕಿತ್ತುಕೊಂಡಿತು ! ಪಾಪ ! ಆ ಪ್ರಾಣಿಗೆ ಇದೇ ಮೊದಲು !—ವೇಶ್ಯಾಗೃಹ ಪ್ರವೇಶಕ್ಕೆ ! ತಿಳಿಯದೆ ಅದನ್ನು ಹೊಕ್ಕು ಆ ಮೇಲೆ ಅದರ ತಿಳಿವುಂಟಾ ಗಿದೆ ! ಅವನು ಬಂದ ಉದ್ದೇಶವೇನು ?—ಇಲ್ಲಿ ಅವನು ನೋಡಿದುದೇನು ? ಅವನ ಸಹಜವಾದ ಕನಿಕರವು ಕ್ಷಣಾರ್ಧದಲ್ಲಿ ಕಡುಗೋಪಕ್ಕೆ ತಿರುಗಿತು. "ಅಯ್ಯೋ ! ಇವರು ಬಡವರು—ತೀರ ಬಡವರು ;—ಇವರಿಗೆ ಸಹಾನು ಭೂತಿ ತೋರಿಸೋಣವೆಂದು ಬಂದರೆ—ಇವರು ಇಂತಹ ಪಾಪಿಗಳಾ ದರೆ ! "—ಎಂದು ಅವನ ಹೃದಯ ಕ್ಷೋಭೆಯಿಂದ ತಲ್ಲಣಿಸಿಹೋಯಿತು. . . . "ಎಂತಹ ಪಾಪಿಜನ್ಮ ಈ ನಾಯಿಗಳದು ! ಎಷ್ಟು ಮನೆಗಳು ಹಾಳು !—ಎಷ್ಟು ಸಂಸಾರಗಳು ಒಡಕು !—ಈ—ಈ ಪಿಶಾಚಿಗಳಿಂದ ! ಎಷ್ಟು ಕಲಹ !—ಎಷ್ಟು ಖೂನಿ ! . . . ಎಷ್ಟು ರೋಗ !—ಎಷ್ಟು ಸಾವು ! . . . ಹುಂ ! ಏನು ಉಪಾಯ !—ಅದೆಂತಹ ಕೃತ್ರಿಮ— ಈ ಮುಂಡೆಯರದು ! ವಸ್ತ್ರ ಮಾರಿಸುವ ನೆವದಲ್ಲಿ ಹುಡುಗನನ್ನಟ್ಟಿ ಜನರನ್ನು ಬರಮಾಡಿಕೊಳ್ಳುತ್ತಾರಲ್ಲಾ ! ಈ—ಈ ಸಮಾಜದ ಬಂದಳಿಕೆ ಗಳನ್ನು—ಈ ರಕ್ಕಸಿಯರನ್ನು ಹಿಡಿದು ಸುಟ್ಟುಬಿಡಬೇಕು—ಜೀವಸಹಿತ ! ಈ ಪಾಪಿಗಳ ಸೋಂಕನ್ನು ತೊಳೆಯುವುದಕ್ಕೆ ಒಂದಲ್ಲ—ನೂರು ಗಂಗಾ ನದಿಗಳಾದರೂ ಸಾಲದು ! ಇವರು ಹೋಗಬೇಕು—ನಿಶ್ಶೇಷವಾಗಿ ತೊಡೆದು ಹೋಗಬೇಕು !! ಅಲ್ಲಿಯ ವರೆಗೂ ಏಳಿಗೆಯಿಲ್ಲ ನಮಗೆ !! . . ."

ಈ ಧಗಧಗಿಸುವ ಯೋಚನೆಗಳ ಜ್ವಾಲೆಯಲ್ಲಿ ರಾಜನ ಹೃದಯ ಸೀದ ಹಾಗಾಯಿತು. ಪಾಪ, ರಾಜ ಆದರ್ಶಪ್ರಿಯ ; ಅವನ ಅಂತರಂಗವು ಆದರ್ಶತೆಯಿಂದ ತುಂಬಿತುಳುಕುತ್ತಿತ್ತು. ಅದು ಅನುಭವದಿಂದ ಮೂಡಿದು ದಲ್ಲ—ಅನುಕರಣದಿಂದ ಮೂಡಿದುದು. ಆದುದರಿಂದ ನಿಸರ್ಗದಲ್ಲಿ ಅವನಿಗೆ ಅಭಿರುಚಿ ಕಡಿಮೆ—ಅದರ ವಿಷಯದಲ್ಲಿ ಅವನು ಯಾವಾಗಲೂ ಅತೃಪ್ತ. ತನ್ನ ಆಂತರಿಕ ಕಲ್ಪನೆಯ ಆದರ್ಶದಿಂದ ಅವನು ಹೊರಗಿನ ಪ್ರಪಂಚದ ಸ್ಥಿತಿಗತಿಗಳನ್ನಳೆಯಲು ಪ್ರಯತ್ನಪಡುತ್ತಿದ್ದ. ಆದುದರಿಂದ ಹೆಜ್ಜೆಹೆಜ್ಜೆಗೂ ಅವನ ಆದರ್ಶದ ಗೋಪುರಕ್ಕೆ ಬರಸಿಡಿಲು ಬಡಿಯುತ್ತಿತ್ತು. ಬಾಹ್ಯ ಪ್ರಪಂಚದಲ್ಲಿ ಅವನಿಗಿದ್ದ ಅನಾಸಕ್ತಿ—ಅತೃಪ್ತಿಗಳ ಫಲವಾಗಿ ಅವನ

ಹೃದಯದಲ್ಲಿ ಆದರ್ಶಪ್ರಪಂಚವೊಂದು ರೂಪುಗೊಂಡಿತ್ತು. ಅಲ್ಲಿ ರೋಗವಿಲ್ಲ—ಕಳವಿಲ್ಲ—ಖೂನಿಯಿಲ್ಲ—ದರೋಡೆಯಿಲ್ಲ! ಬಡತನವು ಅಲ್ಲಿಂದ ಗಡೀಪಾರಾಗಿಬಿಟ್ಟಿದ್ದಿತು! ಅಲ್ಲಿ ವೇಶ್ಯೆಯರ ನೆರಳಿಗೂ ಸ್ಥಳವಿಲ್ಲ! ಅಂತಹವನು—ವಿಧಿಯ ಪರಿಹಾಸ್ಯವೋ ಎಂಬಂತೆ—ಇಂದು ವೇಶ್ಯಾಸನ್ನಿಧಾನದಲ್ಲಿದ್ದಾನೆ!!

ಮೂರ್ತಿ ಒಂದು ಕಡೆ, ಪುಟ್ಟಮಣಿಯ ರೂಪರಾಶಿಯಿಂದ ಆದಷ್ಟನ್ನು ತನ್ನ ಕಣ್ಣುಗಳಿಂದ ಶೇಖರಿಸುತ್ತಿದ್ದ. ಇನ್ನೊಂದು ಕಡೆ, ರಾಜನ ಹೃದಯದ ಭಾವನೆಗಳನ್ನು ಊಹಿಸಲು ಪ್ರಯತ್ನಪಡುತ್ತಿದ್ದ. "ಪುಟ್ಟದಿಹ ನಾಳೆ—ಮಡಿದಿರುವ ನಿನ್ನೆ! ಇಂದು ಸೊಗಸಿರಲು ಅವಕಾಗಿ ಕಳವಳವೇಕೆ?" ಎನ್ನುವ ಪ್ರಕೃತಿ ಅವನದು.

ರಾಜನಿಗೆ ಪುಟ್ಟಮಣಿ ತಂದಿಟ್ಟ ತಾಂಬೂಲವೇ ಆಗಲಿ, ಅವಳ ಒನಪು ಒಯ್ಯಾರಗಳೇ ಆಗಲಿ, ಅವಳ ನಮಸ್ಕಾರವೇ ಆಗಲಿ ಒಂದೂ ಬೇಕಾಗಿರಲಿಲ್ಲ. ಅವನು ಇಲ್ಲಿಗೆ ತನ್ನ ರಸಿಕತನನ್ನು ತೋರಿಸುವುದಕ್ಕಾಗಿ ಬಂದಿದ್ದ. ಆದರೆ ಇಲ್ಲಿ ಅದಕ್ಕೆ ಅಗತ್ಯವಿರಲಿಲ್ಲ; ಸ್ಥಳಮಾಹಾತ್ಮ್ಯ ತಿಳಿದ ಮೇಲೆ ಅದು ಗುರುತಿಲ್ಲದ ಹಾಗೆ ಆರಿಹೋಗಿತ್ತು! ಈಗ ಇದ್ದುದು ಕೋಪ—ಕಡುಗೋಪ! ಅದನ್ನು ಅವರಿಗೆ ಹೇಗಾದರೂ ತೋರಿಸಬೇಕು! ಹೇಗೆ? ಅದು ಅವನಿಗೆ ತೋರದೆ—ಮಹಾಸಾಗರದಲ್ಲಿ ಪ್ರಚಂಡ ಬಿರುಗಾಳಿ ಏಳುವ ಮೊದಲು ತೋರುವ ಶಾಂತತೆಯಂತೆ—ಮೂಕನಾಗಿದ್ದ. ಈ ಸಮಯದಲ್ಲಿಯೇ ಪುಟ್ಟಮಣಿ ತಾಂಬೂಲ ತಂದಿಟ್ಟು ನಮಸ್ಕಾರ ಮಾಡಿದ್ದು.

ಇವರಿಬ್ಬರೂ ಮಾತನಾಡದೆ ಇದ್ದುದನ್ನು ನೋಡಿ ಹಿರಿಯವಳೇ ಪುನಃ ಮಾತಿಗೆ ಪ್ರಾರಂಭಿಸಿದಳು. ಸೆರಗಿನ ತುದಿಯನ್ನು ತಿರುಚುತ್ತ, ಕೊರಳನ್ನು ಕೊಂಕಿಸಿ, ನೆಲದ ಮೇಲೆ ದೃಷ್ಟಿಯಿಟ್ಟು, ಮಧ್ಯೆ ಮಧ್ಯೆ ಮುಗುಳ್ನಗೆಯನ್ನು ಮಿಂಚಿಸುತ್ತ, ಮಾತಿಗೊಂದು ಸಲ ತುದಿನಾಲಗೆಯಿಂದ ತುಟಿಯನ್ನು ಸವರಿಕೊಳ್ಳುತ್ತ ಮಾತನಾಡಿದಳು—

"ಏನೋ—ಬಡವರ ಸೇವೆ; ನಿಮ್ಮ—ದಯದಿಂದ—ಬಂದು—ಬದುಕು . . . ನಮ್ಮದು."

ರಾಜ ಕುಳಿತಿದ್ದವನು ಎದ್ದ!—ಬಿರುಗಾಳಿಯೆದ್ದ ಹಾಗೆ! ಅವನ ಶಕ್ತಿಗೆ ಮೀರಿತು ಕೋಪ! ಮುಷ್ಟಿಗಟ್ಟಿ, ಹುಬ್ಬುಗಂಟಿಕ್ಕಿ ಅತಿ ತುಚ್ಛವಾದ ಧ್ವನಿಯಿಂದ ಒದರಿದ—

"ಥತ್—ನಾವಿಲ್ಲಿಗೆ ಬರಬಾರದಾಗಿತ್ತು! ಶುದ್ಧ ಹಲ್ಕಾ ಸಹವಾಸ !!"

ಈ ಮಾತನ್ನು ಕೇಳಿದೊಡನೆ ಪುಟ್ಟಮಣಿ, ಹುಬ್ಬುಕಚ್ಚಿ—ಹುಬ್ಬು ಗಂಟಿಕ್ಕಿ, ಮುಖತಿರುವಿಕೊಂಡು, ಒಳಕೋಣೆಗೆ ಮಿಂಚಿಹೋದಳು ಚಿಗರ ಮರಿಯ ಹಾಗೆ. ಹಿರಿಯುವಳು ರಾಜನ ಮಾತಿನಿಂದಲೂ ಅವನ ರೀತಿ ಯಿಂದಲೂ ಕ್ಷಣಕಾಲ ಅಪ್ರತಿಭಳಾದಳು—ಅಧೀರಳಾಗಲಿಲ್ಲ! ಅವಳಿಗೆ ಒಂದು ಸಲ ಆಶ್ಚರ್ಯ! ಒಂದು ಸಲ ಕೋಪ. ಹಣ ಬುಟ್ಟಿಗೆ ಬಿತ್ತು—ಅಂದುಕೊಂಡರೆ, ಇದೇನು ಈತನ ಪರಿ!—ಎಂದು ಆಶ್ಚರ್ಯ. ಹಲ್ಕಾ ಸಹವಾಸ ಅಂದನಲ್ಲಾ ಎಂದು ಕೋಪ. ಅವಳಿಗೆ ಭಯವುಂಟಾಗ ಲಿಲ್ಲ; ಇದುವರೆಗೆ ಎಷ್ಟೋ ಜನ ಅವಳ ಮನೆಯ ಹೊಸಿಲನ್ನು ದಾಟಿ ದ್ದರು! ಇದು ಹೇಗೆ ಕೊನೆಗಾಣುತ್ತದೆ ನೋಡಿಯೇ ಬಿಡಬೇಕೆಂದು, ಮುಖದ ಮೇಲೆ ಮನಸ್ಸಿನ ಅಸಮಾಧಾನವನ್ನು ಸೂಚಿಸುತ್ತ, ಎದ್ದುನಿಂತು, ಸೊಂಟದ ಮೇಲೆ ಕೈಯಿಟ್ಟು ಹುಬ್ಬುಗಂಟಿಕ್ಕಿ "ಏನು ಸ್ವಾಮಿ!— ಹಲ್ಕಾಗಿಲ್ಕಾ ಎಂದು ಬಹಳ ದೊಡ್ಡ ಮಾತನಾಡುತ್ತೀರಿ!" ಎಂದಳು. ಹೆಂಗುಸು—ಅದರಲ್ಲೂ ಸೂಳೆ—ಧೈರ್ಯಮಾಡಿದಳೆಂದರೆ ಗಂಡಸಿನ ಅವಸ್ಥೆ ನೋಡಬಹುದೆ! ರಾಜ ನಿಂತಿದ್ದವನು ಕುಳಿತುಬಿಟ್ಟ! ಕುಳಿತು ಮೂರ್ತಿಯ ಮುಖವನ್ನು ನೋಡಿದ. ಆ ಕಡೆಯಿಂದ ಏನೂ ಸಹಾಯ ಬರುವಂತೆ ತೋರಲಿಲ್ಲ. ಮೂರ್ತಿ ತಮಾಷೆ ನೋಡುವುದಕ್ಕೆ ಬಂದಿದ್ದ—ಸಹಾಯ ಮಾಡುವುದಕ್ಕಲ್ಲ. ರಾಜ ಏಕಾಂಗಿಯಾಗಿ ವಾಗ್ಯುದ್ಧಕ್ಕೆ ನಿಲ್ಲಬೇಕಾ ಯಿತು.

"ಅಷ್ಟಲ್ಲದೆ ಏನು! ನಾವು ಬಂದದ್ದು ಸೂಳೇರ ಮನೆಗೆ ಎಂದಲ್ಲ!"

"ಅದು ನಮ್ಮ ತಪ್ಪೆ?"

"ಹೌದು ನಿಮ್ಮ ತಪ್ಪು!"

"ಅದು ಹೇಗೆ—ಅಪ್ಪಣೆ ಕೊಡಿಸಿ!"

"ಅದು ಹೀಗೆ!" ಎಂದು ಹೇಳಿ, ರಾಜ ಆಕೆ ಕಳಿಸಿದ್ದ ವಸ್ತ್ರವನ್ನು ಮುಂದಕ್ಕೆ ಹಿಡಿದು "ವಸ್ತ್ರ ಮಾರಿಸುವ ನೆಪದಲ್ಲಿ ಜನರನ್ನು ಸೆಳೆಯು ವುದು!" ಎಂದ. ಆಕೆ ವ್ಯಂಗ್ಯವಾಗಿ ನಗುತ್ತ—

"ನೀವು ತಿಂಡಿ ಕಳಿಸಿದಿರಲ್ಲ!—ಅದರ ಅರ್ಥವೇನು?" ಎಂದಳು.

"ಹೌದು ಕಳಿಸಿದೆ! ಆದರೆ ಆ ಹುಡುಗ—ಎಲ್ಲಿ ಹುಡುಗ!—ಪಾಪ, ಹನೆತನನ್ತರ ಹುಡುಗನಿರಬೇಕು—ತೀರ ಬಡವರೆಂದು ತೋರುತ್ತದೆ—

